# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಏಪ್ರಿಲ್ ೨೮, ೨೦೧೬ (ವೈಶಾಖ ೮, ಶಕ ವರ್ಷ ೧೯೩೮)<br>Bengaluru, Thursday, April 28, 2016 (Vaishakha 8, Shaka Varsha 1938) | ಸಂಚಿಕೆ ೧೭<br>Issue 17 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಯೋಜನಾ ಇಲಾಖೆಯ ಪತ್ರ ಸಂಖ್ಯೆ: ಪಿಡಿ 5 ಎಸ್‌ಡಿಪಿ 2015(ಇಂಧನ) ದಿನಾಂಕ: 30–03–2015
2. ಅ.ಟಿ. ಸಂಖ್ಯೆ: ಇಎನ್ 11 ಪಿಎಸ್‌ಆರ್ 2015 ದಿನಾಂಕ: 26–06–2015
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18–06–2015, 31–10–2015 ಮತ್ತು 25–01–2016
4. ಯೋಜನಾ ಇಲಾಖೆಯ ಅ.ಟಿ. ಸಂಖ್ಯೆ: ಪಿಡಿ 05 ಎಸ್‌ಡಿಪಿ 2015 (ಇಂಧನ) ದಿನಾಂಕ: 03–08–2015
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 11 ಪಿಎಸ್‌ಆರ್ 2015 ದಿನಾಂಕ: 25–08–2015 ಮತ್ತು 30–12–2015
6. ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ದಿನಾಂಕ: 19–01–2016

**ಪ್ರಸ್ತಾವನೆ :**

1. 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801–01–190–0–09–133 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಹೂಡಿಕೆ–ವಿಶೇಷ ಅಭಿವೃದ್ಧಿ ಯೋಜನೆಯಡಿ ರೂ. 100.00 ಕೋಟಿಗಳನ್ನು ಒದಗಿಸಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ–1ರಲ್ಲಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಆಯವ್ಯಯದಲ್ಲಿ ಒದಗಿಸಿರುವ ರೂ. 100.00 ಕೋಟಿಗಳ ಅನುದಾನವನ್ನು ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿಗಾಗಿ ತಾಲ್ಲೂಕುವಾರು ಹಂಚಿಕೆ ಮಾಡುವಂತೆ ತಿಳಿಸಿದೆ. ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಹಿಂದುಳಿದ ತಾಲ್ಲೂಕುಗಳ ಸಿಡಿಐ ಆಧರಿಸಿ ಒದಗಿಸಿದ ತಾಲ್ಲೂಕುವಾರು ಹಂಚಿಕೆಗೆ ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಹುಕ್ಕೇರಿ ವಿದ್ಯುತ್ ಸಹಕಾರ ಸಂಘ ನಿಯಮಿತವು ಒದಗಿಸಿರುವ ಸವಿವರ ಕ್ರಿಯಾಯೋಜನೆಗೆ (ಭೌತಿಕ ಮತ್ತು ಆರ್ಥಿಕ) ಯೋಜನಾ ಇಲಾಖೆ ಮೇಲೆ ಓದಲಾದ ಕ್ರಮ ಸಂಖ್ಯೆ–2ರಲ್ಲಿ ಅನುಮೋದನೆ ನೀಡಿದೆ.

3. ಮೇಲಿನ ಕ್ರ.ಸಂ.–3ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ನಾಲ್ಕನೆ ತ್ರೈಮಾಸಿಕಕ್ಕೆ ಬಿಡುಗಡೆ ಮಾಡಲು ವಿನಾಯಿತಿ ನೀಡಿ ಆದೇಶಿಸಲಾಗಿದೆ.

4. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಮೇಲಿನ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರಿ ಅದೇಶದಲ್ಲಿ 2015–16ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ವಿಶೇಷ ಅಭಿವೃದ್ಧಿ ಯೋಜನೆಗಾಗಿ ರೂ. 100.00 ಕೋಟಿಗಳಲ್ಲಿ ರೂ. 75.00 ಕೋಟಿಗಳನ್ನು ಈಗಾಗಲೇ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಬಂಡವಾಳ ಹೂಡಿಕೆಗಾಗಿ ಹಣ ಬಿಡುಗಡೆ ಮಾಡಲಾಗಿದೆ.

5. ಮೊದಲ ಮೂರು ತ್ರೈಮಾಸಿಕಕ್ಕೆ ಬಿಡುಗಡೆ ಮಾಡಿರುವ ಮೊತ್ತಕ್ಕೆ ವಿಸಕಂಗಳು ಸಾಧಿಸಿರುವ ಆರ್ಥಿಕ ಪ್ರಗತಿಯ ವಿವರಗಳು ಈ ಕೆಳಕಂಡಂತಿದೆ.

**ರೂ. ಕೋಟಿಗಳಲ್ಲಿ**

| ಕ್ರ.ಸಂ. | ವಿಸಕಂಗಳು | ಮೊದಲ ಮೂರು ತ್ರೈಮಾಸಿಕಕ್ಕೆ ಬಿಡುಗಡೆ ಮಾಡಿರುವ ಮೊತ್ತ | ಜನವರಿ 2016ರ ಅಂತ್ಯಕ್ಕೆ ಸಾಧಿಸಿರುವ ಆರ್ಥಿಕ ಪ್ರಗತಿ | ಶೇಕಡವಾರು ಪ್ರಗತಿ |
|---|---|---|---|---|
| 1 | ಬೆವಿಕಂ | 17.57 | 9.38 | 53.39% |
| 2 | ಮವಿಕಂ | 2.18 | 2.18 | 100.00% |
| 3 | ಹುವಿಕಂ | 14.69 | 10.09 | 68.69% |
| 4 | ಗುವಿಕಂ | 30.00 | 30.00 | 100.00% |
| 5 | ಚಾವಿಸನಿನಿ | 10.03 | 8.76 | 87.34% |
| 6 | ಹುಕ್ಕೇರಿ | 0.53 | 0.00 | 0.00% |
| | **ಒಟ್ಟು** | **75.00** | **60.41** | **80.55%** |

6. ವಿಶೇಷ ಅಭಿವೃದ್ಧಿ ಯೋಜನೆಗಾಗಿ 2015–16ನೇ ಸಾಲಿನ ಆಯವ್ಯಯದ ಸವಿವರ ಅಂದಾಜಿನಲ್ಲಿ ಲೆಕ್ಕಶೀರ್ಷಿಕೆ 4801-01-190-0-09-133 (ಯೋಜನೆ) "ವಿದ್ಯುಚ್ಛಕ್ತಿ ಬಳಕೆಯಲ್ಲಿ ಹೂಡಿಕೆಯಡಿ–ಆಯವ್ಯಯದಲ್ಲಿ ರೂ. 100.00 ಕೋಟಿಗಳನ್ನು ಒದಗಿಸಿದ್ದು, ಅದರಲ್ಲಿ ರೂ. 25.00 ಕೋಟಿಗಳನ್ನು ನಾಲ್ಕನೆ ತ್ರೈಮಾಸಿಕಕ್ಕೆ ವಿಶೇಷ ಅಭಿವೃದ್ಧಿ ಯೋಜನೆಯಡಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಬಂಡವಾಳ ಹೂಡಿಕೆಗಾಗಿ ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಇಎನ್ 11 ಪಿಎಸ್‌ಆರ್ 2015/ಪಿ1, ಬೆಂಗಳೂರು, ದಿನಾಂಕ : 18-02-2016**

1. 2015–16ನೇ ಸಾಲಿನ ನಾಲ್ಕನೇ ತ್ರೈಮಾಸಿಕಕ್ಕೆ ಸರ್ಕಾರವು ಲೆಕ್ಕಶೀರ್ಷಿಕೆ 4801-01-190-0-09-133 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಹೂಡಿಕೆ–ವಿಶೇಷ ಅಭಿವೃದ್ಧಿ ಯೋಜನೆಯಡಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ರೂ. 25.00 ಕೋಟಿಗಳನ್ನು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಡಾ॥ ನಂಜುಂಡಪ್ಪ ವರದಿಯ ಪ್ರಕಾರ ರಾಜ್ಯದ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ಹಮ್ಮಿಕೊಂಡಿರುವ ವಿಶೇಷ ಅಭಿವೃದ್ಧಿ ಯೋಜನೆಯಡಿ (SDP) ಬಿಡುಗಡೆ ಮಾಡಿ ಆದೇಶಿಸಿದೆ.

| **ಕ್ರಮ ಸಂಖ್ಯೆ** | **ವಿದ್ಯುತ್ ಸರಬರಾಜು ಕಂಪನಿಗಳು** | **ಮೊತ್ತ (ರೂ. ಕೋಟಿಗಳಲ್ಲಿ)** |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ | 6.21 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ | 0.67 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ | 4.78 |
| 4 | ಗುಲಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ | 10.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | 3.34 |
| | **ಮೊತ್ತ** | **25.00** |

2. ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತಕ್ಕೆ ರೂ.6.21 ಕೋಟಿಗಳನ್ನು, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತಕ್ಕೆ ರೂ. 0.67 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತಕ್ಕೆ ರೂ. 4.78 ಕೋಟಿಗಳನ್ನು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತಕ್ಕೆ ರೂ. 10.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ರೂ. 3.34 ಕೋಟಿಗಳನ್ನು ನೇರ ಬಿಡುಗಡೆ ಮಾಡಿ ಆದೇಶಿಸಿದೆ.

3. ಮೇಲಿನ ಕೋಷ್ಟಕದಲ್ಲಿ ಸೂಚಿಸಿರುವ ಮೊತ್ತಕ್ಕೆ ವಿದ್ಯುತ್ ಸರಬರಾಜು ಕಂಪನಿ ನಿಯಮಿತಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

4. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳಿಗೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳವಾಗಿ ಬಳಸಿಕೊಂಡು, ಈ ಬಗ್ಗೆ ದೃಡೀಕರಣ (utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

5. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

6. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18-06-2015, 31-10-2015 ಮತ್ತು 25-01-2016ರಲ್ಲಿ ನೀಡಿದೆ.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09-04-2015, ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09-10-2015 ಮತ್ತು ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ಬೆಂಗಳೂರು, ದಿನಾಂಕ: 19-01-2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

PR-232

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** 2015-16ನೇ ಸಾಲಿನಲ್ಲಿ ವಿದ್ಯುತ್ ಕ್ಷೇತ್ರದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. 2015-16ನೇ ಸಾಲಿನ ಆಯವ್ಯಯ
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18-06-2015, 31-10-2015 ಮತ್ತು 25-01-2016
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015 ದಿನಾಂಕ: 20-06-2015, 01-09-2015 ಮತ್ತು 09-11-2015
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 03-12-2015
5. ಕವಿನಿನಿ ಪತ್ರ ಸಂಖ್ಯೆ: ಎ1 ಎಫ್3 ಬಿ2 ದಿನಾಂಕ: 06-02-2016
6. ಕವಿಪ್ರನಿನಿ ಪತ್ರ ಸಂಖ್ಯೆ: ಕವಿಪ್ರನಿನಿ/ವ್ಯನಿ/ಆಕಾ/ಆಸ(ಲೇ&ಸಂ)/ಕೆಸಿಒ-30/14398/2009-10/83 ದಿನಾಂಕ: 09-10-2015

**ಪ್ರಸ್ತಾವನೆ :**

1. ಮೇಲಿನ ಕ್ರಸಂ-1ರಲ್ಲಿ ಓದಲಾದ 2015-16ನೇ ಸಾಲಿನ ಆಯವ್ಯಯದಲ್ಲಿ ರೂ. 727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ. ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ) ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ-ಬಂಡವಾಳ ಹೂಡಿಕೆಗಾಗಿ ರೂ. 677.83 ಕೋಟಿಗಳನ್ನು ಲೆಕ್ಕಶೀರ್ಷಿಕೆ 4801-01-190-0-09-422 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಗಿರಿಜನ ಉಪಯೋಜನೆಗಾಗಿ ರೂ. 12.30 ಕೋಟಿಗಳು ಸೇರಿದಂತೆ ಒಟ್ಟಾರೆ ರೂ. 727.02 ಕೋಟಿಗಳ ಬಂಡವಾಳ ಒದಗಿಸಲಾಗಿದೆ.

2. ಮೇಲಿನ ಕ್ರಸಂಖ್ಯೆ 2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 1-A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

3. ಮೇಲಿನ ಕ್ರಮ ಸಂಖ್ಯೆ 3ರಲ್ಲಿ ಮತ್ತು 4ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2015-16ನೇ ಸಾಲಿಗೆ ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ) ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಈವರೆವಿಗೆ ರೂ. 508.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲಿನ ಕ್ರಸಂ. (5)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರೂ. 100.00 ಕೋಟಿಗಳ ಬಂಡವಾಳವನ್ನು ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

5. ಮೇಲಿನ ಕ್ರಸಂ. (6)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರೂ. 300.00 ಕೋಟಿಗಳ ಬಂಡವಾಳವನ್ನು ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

6. 2015-16ನೇ ಸಾಲಿನ ನಾಲ್ಕನೆ ತ್ರೈಮಾಸಿಕಕ್ಕೆ ವಿದ್ಯುತ್ ವಲಯದಲ್ಲಿ ಬಂಡವಾಳ ಹೂಡಿಕೆಯಡಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಂಡವಾಳ ಬಿಡುಗಡೆ ಮಾಡಲು ಪ್ರಸ್ತಾಪಿಸಿ ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 16 ಪಿಎಸ್ಆರ್ 2015, ಬೆಂಗಳೂರು, ದಿನಾಂಕ : 24-02-2016**

1. 2015-16ನೇ ಸಾಲಿನ ನಾಲ್ಕನೇ ತ್ರೈಮಾಸಿಕಕ್ಕೆ ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕಶೀರ್ಷಿಕೆ "4801-01-190-0-09-211 Investment in Power Utilities (ಯೋಜನೆ)" ವಿದ್ಯುತ್ ಬಳಕೆಯಲ್ಲಿ ಬಂಡವಾಳ ಹೂಡಿಕೆಯಡಿ

ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 60.00 (ಅರವತ್ತು ಕೋಟಿಗಳು) ಕೋಟಿಗಳನ್ನು ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ.40.00 (ನಲವತ್ತು ಕೋಟಿಗಳು) ಕೋಟಿಗಳನ್ನು, ಒಟ್ಟಾರೆ ರೂ. 100.00 (ನೂರು ಕೋಟಿಗಳು) ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 40.00 ಕೋಟಿಗಳ ಬಂಡವಾಳದಲ್ಲಿ ಸರ್ಕಾರದ ಮಟ್ಟದಲ್ಲಿ ತೀರ್ಮಾನಿಸಿದಂತೆ M/s Hindustan Aeronautics Limited (HAL) ರವರು ಬಿದರೆಹಳ್ಳಿ ಕಾವಲ್, ನಿಟ್ಟೂರು ಹೋಬಳಿ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ "A Green Field Project" ಹೆಲಿಕಾಪ್ಟರ್ ಘಟಕಕ್ಕೆ ಸಂಬಂಧಿಸಿದಂತೆ, ವಶಪಡಿಸಿಕೊಂಡಿರುವ 600 ಎಕರೆ ಭೂ–ಪ್ರದೇಶದಲ್ಲಿ ಹಾದು ಹೋಗಿರುವ 220 ಕೆ.ವಿ. D/C ಶಿವಮೊಗ್ಗ–ನೆಲಮಂಗಲ ಹಾಗೂ 110 ಕೆ.ವಿ. S/C ನಿಟ್ಟೂರು ದೊಡ್ಡಗುಣಿ ವಿದ್ಯುತ್ ಪ್ರಸರಣ ಮಾರ್ಗಗಳನ್ನು ಸ್ಥಳಾಂತರಿಸುವ ಕಾಮಗಾರಿಗಳಿಗೆ ಹಾಗೂ ಬಾಕಿ ಬಂಡವಾಳ ಬಿಡುಗಡೆಯನ್ನು ಇತರೆ ಬಂಡವಾಳ ಕಾಮಗಾರಿಗಳಿಗೆ ವೆಚ್ಚ ಮಾಡುವುದು. ಈ ಬಗ್ಗೆ ದೃಢೀಕರಣ (Utilisation Certificate) ಹಾಗೂ ಅನುಸರಣ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 60.00 ಕೋಟಿಗಳ ಮೊಬಲಗನ್ನು ಬಂಡವಾಳ (Equity) ವಾಗಿ ಬಳಸಿಕೊಂಡು ಈ ಬಗ್ಗೆ ದೃಢೀಕರಣ (Utilisation Certificate) ಹಾಗೂ ಅನುಸರಣ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

4. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಗಳು ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲುರುಜುವನ್ನು ಹಣ ಸ್ವೀಕೃತಿ ರಶೀದಿ (Payees receipt) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

5. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರೀಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

6. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಅನುಮೋದನೆಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18–06–2015, 31–10–2015 ಮತ್ತು 25–01–2016ರಲ್ಲಿ ನೀಡಿದೆ.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09–04–2015, ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09–10–2015 ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016, ಬೆಂಗಳೂರು, ದಿನಾಂಕ: 19–01–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**PR-233**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನ ಆಯವ್ಯಯದಲ್ಲಿ ಸೌರಶಕ್ತಿ ಯೋಜನೆಗೆ ಒದಗಿಸಿರುವ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸಮಾಜ ಕಲ್ಯಾಣ ಇಲಾಖೆ ಪತ್ರ ಸಂಖ್ಯೆ: ಸಕಇ 228 ಎಸ್ಎಲ್‌ಪಿ 2015 ದಿನಾಂಕ: 18–06–2015
2. ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ: ಆಇ 684 ವೆಚ್ಚ–1/2015 ದಿನಾಂಕ: 17–07–2015
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ವಿಎಸ್ಇ 2016 ದಿನಾಂಕ: 22–01–2016
4. ಅರೆ ಸರ್ಕಾರಿ ಪತ್ರ ಸಂಖ್ಯೆ: ಮಮಇ 205 ಐಸಿಡಿ 2015 ದಿನಾಂಕ 12–02–2016

**ಪ್ರಸ್ತಾವನೆ :**

1. ಸೌರಶಕ್ತಿ ವಿದ್ಯುತ್ ಯೋಜನೆಯ ಅನುಸ್ಥಾನಕ್ಕೆ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7 ಪುಟ ಸಂಖ್ಯೆ: 79ರಲ್ಲಿ ಲೆಕ್ಕಶೀರ್ಷಿಕೆ 2801–80–101–1–08–059–ಸೌರಶಕ್ತಿ ಯೋಜನೆ–ಇತರೆ ಖರ್ಚುಗಳಡಿ ರೂ. 15.18 ಕೋಟಿಗಳನ್ನು ಲೆಕ್ಕಶೀರ್ಷಿಕೆ 2801–80–101–1–08–422– ಸೌರಶಕ್ತಿ ಯೋಜನೆ–ಪರಿಶಿಷ್ಟ ಜಾತಿ ಉಪಯೋಜನೆಯಡಿ ರೂ. 3.43 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 2801–80–101–1–08–423– ಸೌರಶಕ್ತಿ ಯೋಜನೆ–ಗಿರಿಜನ ಉಪಯೋಜನೆಯಡಿ ರೂ. 1.39 ಕೋಟಿಗಳನ್ನು ಒಟ್ಟಾರೆಯಾಗಿ ರೂ. 20.00 ಕೋಟಿಗಳನ್ನು ಒದಗಿಸಲಾಗಿದೆ.

2. ಮೇಲೆ ಓದಲಾದ ಕ್ರ.ಸಂ. (1)ರಲ್ಲಿ 2015–16ನೇ ಸಾಲಿಗೆ ಸೌರಶಕ್ತಿ ಯೋಜನೆಯಡಿ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಗೆ ಒದಗಿಸಿರುವ ಮೊತ್ತ ಕ್ರಮವಾಗಿ ರೂ. 3.43 ಕೋಟಿಗಳು ಮತ್ತು ರೂ. 1.39 ಕೋಟಿಗಳು ಒಟ್ಟಾರೆ ರೂ. 4.82 ಕೋಟಿಗಳಿಗೆ ಸೌರಶಕ್ತಿ ಪಂಪ್‌ಸೆಟ್‌ಗಳನ್ನು ಒದಗಿಸುವ ಕ್ರಿಯಾಯೋಜನೆಗೆ ರಾಜ್ಯ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ ಅನುಮೋದನೆ ನೀಡಿರುವುದಾಗಿ ಸಮಾಜ ಕಲ್ಯಾಣ ಇಲಾಖೆ ಪತ್ರ ಸಂಖ್ಯೆ: ಸಕಇ 228 ಎಸ್ಎಲ್‌ಪಿ 2015 ದಿನಾಂಕ: 18–06–2015ರಲ್ಲಿ ತಿಳಿಸಿದೆ.

3. ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ಆರ್ಥಿಕ ಇಲಾಖೆ 2015–16ನೇ ಸಾಲಿಗೆ ಅಂಗನವಾಡಿ ಕೇಂದ್ರಗಳಿಗೆ ಸೌರಶಕ್ತಿ ದೀಪಗಳನ್ನು ಮತ್ತು ಫ್ಯಾನುಗಳನ್ನು ಒದಗಿಸಲು ರೂ. 5.00 ಕೋಟಿ ಅನುದಾನವನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಂಬಂಧಪಟ್ಟಂತೆ ಆಯವ್ಯಯ ಭಾಷಣದ ಕಂಡಿಕೆ 176ರಲ್ಲಿ ಘೋಷಿಸಿದ್ದು, ಅದರನ್ವಯ ಇಂಧನ ಇಲಾಖೆಯ ಸೌರಶಕ್ತಿ ಯೋಜನೆಯ ಲೆಕ್ಕಶೀರ್ಷಿಕೆ 2801–80–800–1–08ರಡಿ ಕ್ರಿಯಾಯೋಜನೆ ಸೇರ್ಪಡಿಸಲು ತಿಳಿಸಿದೆ.

4. ಮೇಲೆ ಓದಲಾದ ಕ್ರ.ಸಂ. (3)ರಲ್ಲಿ 2015–16ನೇ ಸಾಲಿನಲ್ಲಿ ಸೌರಶಕ್ತಿ ಯೋಜನೆಯಡಿ ಒದಗಿಸಿರುವ ರೂ. 20.00 ಕೋಟಿಗಳ ಅನುದಾನದಲ್ಲಿ ರೂ. 15.00 ಕೋಟಿಗಳನ್ನು ಮುಂದುವರೆದ ಯೋಜನೆಯಾದ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸುವ ಯೋಜನೆಯನ್ನು ಹಾಗೂ ರೂ. 5.00 ಕೋಟಿಗಳ ಅನುದಾನವನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಂಬಂಧಪಟ್ಟಂತೆ ಅಂಗನವಾಡಿ ಕೇಂದ್ರಗಳಿಗೆ ಸೌರಶಕ್ತಿ ದೀಪಗಳನ್ನು ಮತ್ತು ಸೌರಶಕ್ತಿ ಫ್ಯಾನುಗಳನ್ನು ಒದಗಿಸುವ ಯೋಜನೆಯನ್ನು ಅನುಷ್ಠಾನಗೊಳಿಸಲು ಆದೇಶಿಸಿದೆ.

5. ಮೇಲೆ ಓದಲಾದ ಕ್ರ.ಸಂ. (4)ರ ಅರೆ ಸರ್ಕಾರಿ ಪತ್ರದಲ್ಲಿ ಅಪರ ಮುಖ್ಯ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು 2015–16ನೇ ಸಾಲಿನಲ್ಲಿ ಸೌರಶಕ್ತಿ ಯೋಜನೆಯಡಿ ಒದಗಿಸಿರುವ ರೂ. 5.00 ಕೋಟಿಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪರವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬಿಡುಗಡೆ ಮಾಡುವಂತೆ ಕೋರಲಾಗಿದೆ.

6. ಆರ್ಥಿಕ ಇಲಾಖೆಯ ಸೂಚನೆಯ ಮೇರೆಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಂಬಂಧಪಟ್ಟಂತೆ ಅಂಗನವಾಡಿ ಕೇಂದ್ರಗಳಲ್ಲಿ ಸೌರಶಕ್ತಿ ದೀಪಗಳನ್ನು ಮತ್ತು ಫ್ಯಾನುಗಳನ್ನು ಒದಗಿಸಲು ರೂ. 5.00 ಕೋಟಿಗಳನ್ನು ಹಾಗೂ ಇಂಧನ ಇಲಾಖೆಗೆ ಸಂಬಂಧಪಟ್ಟಂತೆ ರೂ.15.00 ಕೋಟಿಗಳನ್ನು ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಒದಗಿಸಲು ಸಾಮಾನ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಯೋಜನೆಯಡಿ ಈ ಕೆಳಕಂಡಂತೆ ಒದಗಿಸಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳಲ್ಲಿ**

| ಕ್ರ. ಸಂ. | ಲೆಕ್ಕಶೀರ್ಷಿಕೆ ಮತ್ತು ವಿವರ | ಆಯವ್ಯಯ ಅಂದಾಜು | ಶೇಕಡವಾರು ಆಯವ್ಯಯ ಹಂಚಿಕೆ | ಮಹಿಳಾ ಮತ್ತು ಮಕ್ಕಳ ಇಲಾಖೆಗೆ ಹಂಚಿಕೆ | ಇಂಧನ ಇಲಾಖೆಗೆ ಹಂಚಿಕೆ |
|---|---|---|---|---|---|
| 1 | 2801–80–101–1–08–059<br>ಸೌರಶಕ್ತಿ ಯೋಜನೆ–ಇತರೆ ಖರ್ಚುಗಳು | 15.18 | 75.90 | 3.80 | 11.38 |
| 2 | 2801–80–101–1–08–422<br>ಸೌರಶಕ್ತಿ ಯೋಜನೆ–ಪರಿಶಿಷ್ಟ ಜಾತಿ ಉಪಯೋಜನೆ | 3.43 | 17.15 | 0.85 | 2.58 |
| 3 | 2801–80–101–1–08–423<br>ಸೌರಶಕ್ತಿ ಯೋಜನೆ–ಗಿರಿಜನ ಉಪಯೋಜನೆ | 1.39 | 6.95 | 0.35 | 1.04 |
| | **ಒಟ್ಟು ಮೊತ್ತ** | **20.00** | **100.00** | **5.00** | **15.00** |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 46 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ : 29–02–2016**

1. 2015–16ನೇ ಸಾಲಿಗೆ ಲೆಕ್ಕಶೀರ್ಷಿಕೆ 2801–80–101–1–08–059–ಸೌರಶಕ್ತಿ ಯೋಜನೆ–ಇತರೆ ಖರ್ಚುಗಳಡಿ ರೂ. 15.18 ಕೋಟಿಗಳನ್ನು, ಲೆಕ್ಕಶೀರ್ಷಿಕೆ 2801–80–101–1–08–422– ಸೌರಶಕ್ತಿ ಯೋಜನೆ–ಪರಿಶಿಷ್ಟ ಜಾತಿ ಉಪಯೋಜನೆಯಡಿ ರೂ. 3.43 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 2801–80–101–1–08–423– ಸೌರಶಕ್ತಿ ಯೋಜನೆ–ಗಿರಿಜನ ಉಪಯೋಜನೆಯಡಿ ರೂ. 1.39 ಕೋಟಿಗಳನ್ನು, ಒಟ್ಟಾರೆಯಾಗಿ ರೂ. 20.00 ಕೋಟಿಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.
2. ಪ್ರಸ್ತಾವನೆಯ ಕಂಡಿಕೆ 6ರಲ್ಲಿ ವಿವರಿಸಿರುವಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ರೂ. 20.00 ಕೋಟಿಗಳ ಅನುದಾನವನ್ನು ವೆಚ್ಚ ಮಾಡಲು ಆದೇಶಿಸಿದೆ.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊತ್ತಕ್ಕೆ ಪ್ರತಿ ಲೆಕ್ಕಶೀರ್ಷಿಕೆಗೆ ಪ್ರತ್ಯೇಕ ಸ್ವೀಕೃತಿ ರಸೀದಿಯನ್ನು ಸಲ್ಲಿಸಿ, ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲುರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣಾ ವರದಿ ಮತ್ತು ಬಳಕೆ ಪ್ರಮಾಣ ಪತ್ರ (Utilisation Certificate) ಸಲ್ಲಿಸತಕ್ಕದ್ದು.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವತಿಯಿಂದ ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ಅನುಷ್ಠಾನಗೊಳಿಸಲು ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಂಬಂಧಪಟ್ಟಂತೆ ಅಂಗನವಾಡಿ ಕೇಂದ್ರಗಳಿಗೆ ಸೌರಶಕ್ತಿ ದೀಪಗಳನ್ನು ಮತ್ತು ಫ್ಯಾನುಗಳನ್ನು ಒದಗಿಸುವ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು, ಹಾಗೂ ಲೆಕ್ಕ ಪರಿಶೋಧನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016 ದಿನಾಂಕ: 19-01-2016ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

PR-234

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** 2015-16ನೇ ಸಾಲಿನಲ್ಲಿ ವಿದ್ಯುತ್ ಕ್ಷೇತ್ರದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. 2015-16ನೇ ಸಾಲಿನ ಆಯವ್ಯಯ
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18-06-2015, 31-10-2015 ಮತ್ತು 25-01-2016
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015 ದಿನಾಂಕ: 20-06-2015, 01-09-2015, 09-11-2015 ಮತ್ತು 24-02-2016
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 03-12-2015
5. ಬೆವಿಕಂ ಈ-ಮೇಲ್ ದಿನಾಂಕ 11-02-2016
6. ಮವಿಕಂ ಪತ್ರ ಸಂಖ್ಯೆ: ಮವಿಕಂ/ಅಇ/(ತಾಂ)/ಕಾನಿ(ತಾಂ)/ಎಮ್1-1079/2015-16-41720-23 ದಿನಾಂಕ: 20-02-2016
7. ಹುವಿಕಂ ಈ-ಮೇಲ್ ದಿನಾಂಕ: 20-02-2016
8. ಗುವಿಕಂ ಪತ್ರ ಸಂಖ್ಯೆ: ಗುವಿಕಂ/ಮುಇ(ಸಿಪಿ)/ಅಇ(ಟಿಪಿ)/ಕಾಇ(ಟಿಪಿ)/ಸಕಾಇ(ಟಿಪಿ)/2015-16/54284-88 ದಿನಾಂಕ: 10-02-2016
9. ಚಾವಿಸನಿನಿ ಈ-ಮೇಲ್ ದಿನಾಂಕ: 22-02-2016

**ಪ್ರಸ್ತಾವನೆ :**

1. ಮೇಲಿನ ಕ್ರ.ಸಂ-1ರಲ್ಲಿ ಓದಲಾದ 2015-16ನೇ ಸಾಲಿನ ಆಯವ್ಯಯದಲ್ಲಿ ರೂ. 727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ. ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ-ಬಂಡವಾಳ ಹೂಡಿಕೆಗಾಗಿ ರೂ. 677.83 ಕೋಟಿಗಳನ್ನು, ಲೆಕ್ಕಶೀರ್ಷಿಕೆ 4801-01-190-0-09-422 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಪರಿಶಿಷ್ಟ ಜಾತಿ ಉಪಯೋಜನೆಗಾಗಿ ರೂ. 36.89 ಕೋಟಗಳು ಮತ್ತು ಲೆಕ್ಕಶೀರ್ಷಿಕೆ 4801-01-190-0-09-423 (ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ-ಗಿರಿಜನ ಉಪಯೋಜನೆಗಾಗಿ ರೂ. 12.30 ಕೋಟಿಗಳು ಸೇರಿದಂತೆ ಒಟ್ಟಾರೆ ರೂ. 727.02 ಕೋಟಿಗಳ ಬಂಡವಾಳ ಒದಗಿಸಲಾಗಿದೆ.
2. ಮೇಲಿನ ಕ್ರಮ ಸಂಖ್ಯೆ 2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1- A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 19576ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.
3. ಮೇಲಿನ ಕ್ರಮ ಸಂಖ್ಯೆ 3ರಲ್ಲಿ ಮತ್ತು 4ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2015-16ನೇ ಸಾಲಿಗೆ ಲೆಕ್ಕಶೀರ್ಷಿಕೆ 4801-01-190-0-09-211 (ಯೋಜನೆ) ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಈವರೆವಿಗೆ ರೂ. 608.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.
4. 2015-16ನೇ ಸಾಲಿನಲ್ಲಿ ವಿದ್ಯುತ್ ಸರಬರಾಜು ಕಂಪನಿಗಳು ಈ ಕೆಳಕಂಡ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುವುದೆಂದು ಮೇಲಿನ ಕ್ರಮ ಸಂಖ್ಯೆ 5 ರಿಂದ 9ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

| ವಿಸಕಂಗಳು | ಕಾಮಗಾರಿಯ ವಿವರಗಳು | ಯೋಜನೆಯ ವೆಚ್ಚ (ರೂ. ಕೋಟಿಗಳಲ್ಲಿ) |
|---|---|---|
| ಬೆವಿಕಂ | ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿ 11 ಕೆ.ವಿ. ವಿದ್ಯುತ್ ಮಾರ್ಗಗಳ ಸ್ಥಳಾಂತರ (Evacuation) ಕಾಮಗಾರಿ ಹಾಗೂ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವ ಕಾಮಗಾರಿ | 38.87 |

| ವಿಸಕಂಗಳು | ಕಾಮಗಾರಿಯ ವಿವರಗಳು | ಯೋಜನೆಯ ವೆಚ್ಚ (ರೂ. ಕೋಟಿಗಳಲ್ಲಿ) |
|---|---|---|
| ಮವಿಕಂ | Providing additional power transformers, Establishing New 33/11 kv substation and Augmentation works ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವುದು, ಹೊಸ 33/11 ಕವಿ ಉಪಕೇಂದ್ರಗಳನ್ನು ಸ್ಥಾಪಿಸುವುದು. ಹೆಚ್ಚುವರಿ ಸಾಮರ್ಥ್ಯದ ಪರಿವರ್ತಕಗಳನ್ನು ಅಳವಡಿಸುವುದು. | 29.56 |
| ಹುವಿಕಂ | Development of Software for remote monitoring of monthly Energy consumption and facilitating the relevant data for billing of water works and high valued LT (Industrial & Commercial) installations in Urban areas, Replacement of overhead LT/HT conductors by ABC conductors, Replacement of Overhead cables by UG Cables and Replacement of existing AAAC conductor by Rabit conductor. | 24.87 |
| ಗುವಿಕಂ | Formation of 33 kv sub transmission ring system within Gulbarga City and establishing 5 No of 33/11 kv 2x5 MVA GIS substations in Kalaburgi City. | 25.00 |
| ಚಾವಿಸನಿನಿ | Replacement of copper conductor and 2/4 AC SR conductor by rabbit ACSR by providing intermediate poles and replacement of deteriorated poles. | 10.56 |
| | **ಒಟ್ಟು** | **128.86** |

5. ವಿದ್ಯುತ್ ಸರಬರಾಜು ಕಂಪನಿಗಳ ಮನವಿಗಳನ್ನು ಪುರಸ್ಕರಿಸಿ, ಒಟ್ಟಾರೆ ರೂ. 69.83 ಕೋಟಿಗಳ ಈಕ್ವಿಟಿ ಬಂಡವಾಳವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 16 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ : 29-02-2016**

1. 2015-16ನೇ ಸಾಲಿಗೆ ಸರ್ಕಾರವು ವಿದ್ಯುತ್ ಸರಬರಾಜು ಕಂಪನಿಗಳಿಗೆ ರೂ. 69.83 ಕೋಟಿಗಳನ್ನು (ರೂ. ಅರವತ್ತೊಂಬತ್ತು ಕೋಟಿ ಎಂಭತ್ತೂರು ಲಕ್ಷಗಳು ಮಾತ್ರ) ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801-01-190-0-09-211 Investment in Power Utilities (ಯೋಜನೆ)" ಯಡಿ ಈ ಕೆಳಕಂಡ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಬಿಡುಗಡೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ಕ್ರ. ಸಂ. | ವಿಸಕಂಗಳು | ಕಾಮಗಾರಿಗಳ ವಿವರ | ಮೊತ್ತ |
|---|---|---|---|
| 1 | ಬೆವಿಕಂ | ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿ 11 ಕೆ.ವಿ. ವಿದ್ಯುತ್ ಮಾರ್ಗಗಳ ಸ್ಥಳಾಂತರ (Evacuation) ಕಾಮಗಾರಿ ಹಾಗೂ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವ ಕಾಮಗಾರಿ | 20.00 |
| 2 | ಮವಿಕಂ | Providing additional power transformers, Establishing New 33/11 kv substation and Augmentation works ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸುವುದು. ಹೊಸ 33/11 ಕೆ.ವಿ. ಉಪಕೇಂದ್ರಗಳನ್ನು ಸ್ಥಾಪಿಸುವುದು. ಹೆಚ್ಚುವರಿ ಸಾಮರ್ಥ್ಯದ ಪರಿವರ್ತಕಗಳನ್ನು ಅಳವಡಿಸುವುದು. | 9.83 |
| 3 | ಹುವಿಕಂ | Development of Software for remote monitoring of monthly Energy consumption and facilitating the relevant data for billing of water works and high valued LT (Industrial & Commercial) installations in Urban areas, Replacement of overhead LT/HT conductors by ABC conductors, Replacement of Overhead cables by UG Cables and Replacement of existing AAAC conductor by Rabit conductor. | 15.00 |

| | | | |
|---|---|---|---|
| 4 | ಗುವಿಕಂ | Formation of 33 kv sub transmission ring system within Gulbarga City and establishing 5 No. of 33/11 kv 2 x 5 MVA GIS Substations in Kalaburgi City. | 15.00 |
| 5 | ಚಾವಿಸನಿನಿ | Replacement of copper conductor and 2/4 AC SR conductor by rabbit ACSR by providing intermediate poles and replacement of deteriorated poles. | 10.00 |
| | | ಒಟ್ಟು | **69.83** |

2. ವಿದ್ಯುತ್ ಸರಬರಾಜು ಕಂಪನಿಗಳು ಮೇಲಿನ ಕೋಷ್ಟಕದಲ್ಲಿ ಬಿಡುಗಡೆ ಮಾಡಿರುವ ಮೊತ್ತಕ್ಕೆ, ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಬಂಡವಾಳ (Equity) ವನ್ನು ಮೇಲಿನ ಕೋಷ್ಠಕದಲ್ಲಿ ನಮೂದಿಸಿರುವ ಕಾಮಗಾರಿಗಳಲ್ಲಿ ಹೂಡಿರುವ ಬಗ್ಗೆ ಮುಂದೆ ಆರ್ಥಿಕ ಮತ್ತು ಭೌತಿಕ ಪ್ರಗತಿ ಸಲ್ಲಿಸುವುದು. ಬಿಡುಗಡೆಯಾದ ಬಂಡವಾಳದ ಬಳಕೆಯ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utilisation Certificate) ವನ್ನು ಸರ್ಕಾರಕ್ಕೆ ಒದಗಿಸುವುದು.

4. ವಿದ್ಯುತ್ಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಅನುಮೋದನೆಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18-06-2015, 31-10-2015 ಮತ್ತು 25-01-2016ರಲ್ಲಿ ನೀಡಿದೆ.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016, ಬೆಂಗಳೂರು, ದಿನಾಂಕ: 19-01-2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**PR-235**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ಆಕುಕ 141 ಆರ್‌ಜಿಯು 2014, ಬೆಂಗಳೂರು, ದಿನಾಂಕ: 05-03-2016.

ಸರ್ಕಾರದ ಆದೇಶ ಸಂಖ್ಯೆ: ಆಕುಕ 141 ಆರ್‌ಜಿಯು 2014, ದಿನಾಂಕ: 11-12-2015 ರಲ್ಲಿನ ಆದೇಶ ಭಾಗದಲ್ಲಿ "2008-09 ನೇ ಸಾಲಿನ ಬೋಧನಾ ಶುಲ್ಕವನ್ನು" ಎಂದು ಇರುವ ಕಡೆ "2008-09 ನೇ ಸಾಲಿನಿಂದ 2012-13 ನೇ ಸಾಲಿನವರೆಗೆ ಒಟ್ಟು 4 1/2 ವರ್ಷಗಳ ಅವಧಿಯ ಬೋಧನಾ ಶುಲ್ಕವನ್ನು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**PR. 227**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಮುರಳಿ**

ಸರ್ಕಾರದ ಅಧೀನ ಕಾರ್ಯದರ್ಶಿ-2 (ಪ್ರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ವೈದ್ಯಕೀಯ ಶಿಕ್ಷಣ)

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2015-16ರ ಹಣಕಾಸು ವರ್ಷದ ನಾಲ್ಕನೇ ತ್ರೈಮಾಸಿಕಕ್ಕೆ ಸಹಾಯಾನುದಾನದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 8 ಪಿಎಸ್‌ಆರ್ 2015 ದಿನಾಂಕ: 16.06.2015, 24.08.2015 ಮತ್ತು 02.11.2015.
2. ಕವಿನಿ ಆಯೋಗದ ಪತ್ರ ಸಂಖ್ಯೆ ನಂ ಎಫ್/15/ಎಬಿ/ಕೆಇಆರ್‌ಸಿ/825 ದಿನಾಂಕ: 12.01.2016.

**ಪ್ರಸ್ತಾವನೆ :**

1. 2015-16ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಒದಗಿಸುವ ಸಲುವಾಗಿ ರೂ.312.00 ಲಕ್ಷಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ "2801-80-101-1-07-101ಯಡಿ ನಿಗಧಿಪಡಿಸಲಾಗಿದೆ. ಇದರಲ್ಲಿ ಮೊದಲ ಮೂರು ತ್ರೈಮಾಸಿಕ್ಕೆ ಮೂರು ಕಂತುಗಳಲ್ಲಿ ರೂ.234.00 ಲಕ್ಷಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ 1ರ ಆದೇಶಗಳಲ್ಲಿ ಈಗಾಗಲೇ ಬಿಡುಗಡೆ ಮಾಡಲಾಗಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ 2015-16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ನಾಲ್ಕನೇಯ ತ್ರೈಮಾಸಿಕದ ಅವಧಿಗೆ ಸಹಾಯಾನುದಾನ ರೂ. 78.00 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ-2ರ ಪತ್ರದಲ್ಲಿ ಕಾರ್ಯದರ್ಶಿ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದವರು ಕೋರಿರುತ್ತಾರೆ. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 8 ಪಿಎಸ್ಆರ್ 2015, ಬೆಂಗಳೂರು, ದಿನಾಂಕ:02.02.2016**

1. ಸರ್ಕಾರವು, 2015-16ನೇ ಹಣಕಾಸು ವರ್ಷದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚಗಳ ಸಲುವಾಗಿ ಲೆಕ್ಕ ಶೀರ್ಷಿಕೆ "2801-80-101-1-07-101 ಸಹಾಯಾನುದಾನ (ಯೋಜನೇತರ)" ಯಡಿ ಒದಗಿಸಿರುವ ಅನುದಾನದಲ್ಲಿ ನಾಲ್ಕನೇ ತ್ರೈಮಾಸಿಕದ ಕಂತಿನ ರೂ.78.00 ಲಕ್ಷಗಳನ್ನು (ಎಪ್ಪತ್ತೆಂಟು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು **"Payees Receipt"** ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು, ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
3. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ದಿನಾಂಕ: 19.01.2016ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

**PR. 228**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ :** 2015-16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011-12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014-15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯ ಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್ಆರ್ 2004 ದಿನಾಂಕ: 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್ಆರ್ 2008 ದಿನಾಂಕ: 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್ಆರ್ 2013 ದಿನಾಂಕ: 17.05.2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್ಆರ್ 2015 ದಿನಾಂಕ 29.04.2015, 18.05.2015, 01.06.2015(TA), 04.06.2015, 01.07.2015, 03.08.2015, 01.09.2015, 15.10.2015, 03.12.2015, 05.12.2015, 10.12.2015(TA) ಮತ್ತು 23.01.2016.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್ಆರ್ 2015/ಪಿ4 ದಿನಾಂಕ: 22.06.2015(TA), 21.07.2015(TA), 25.08.2015(TA), 28.09.2015(TA) ಮತ್ತು 28.10.2015(TA)
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್ಆರ್ 2015 ದಿನಾಂಕ: 22.06.2015.
7. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್ಆರ್ 2015/ಪಿ2 ದಿನಾಂಕ: 04.01.2016(TA), 22.01.2016(TA)

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ:01-08-2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ-3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ: 13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ₹. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014-15ನೇ ಸಾಲಿನಲ್ಲಿ ₹. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015-16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ₹. 106.54

ಕೋಟಿಗಳಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ₹. 88.80 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ₹. 17.74 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ₹. 7,197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ ಜನವರಿ 2016ರವರೆಗೆ ಸಹಾಯಧನ ₹. 4,913.32 ಕೋಟಿಗಳನ್ನು ಬಿಡುಗಡೆ ಮಾಡಿದೆ.

ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ₹. 443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹. 82.41 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ₹. 361.08 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

2014–15ನೇ ಸಾಲಿನ ಬಾಕಿ ಸಹಾಯಧನ ₹. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಅದೇಶಗಳಲ್ಲಿ ₹. 77.69 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ₹. 330.87 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7,197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹. 375.00 ಕೋಟಿಗಳನ್ನು, 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ₹. 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ₹. 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015 ದಿನಾಂಕ: 28.07.2015ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)" ದ ಅಡಿಯಲ್ಲಿ ₹. 7,498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹. 4,913.32 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

₹. ಕೋಟಿಗಳು

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7,197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು. | 3,850.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಬಾಬ್ತು. | 82.41 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು. | 77.69 |
| ಭಾಗ್ಯಜ್ಯೋತಿ /ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 88.80 |
| ತ್ರಿಪಕ್ಷೀಯ ಹೊಂದಾಣಿಕೆ –ಏಪ್ರಿಲ್ 2015ರಿಂದ ಡಿಸೆಂಬರ್ 2015ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು. | 812.42 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತುನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| ಜನವರಿ 2016ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ. | **4,913.32** |

7. ಫೆಬ್ರವರಿ 2016ರ ಮಾಹೆಗೆ ಸಹಾಯಧನ, ಬಾಕಿ ಸಹಾಯಧನ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

₹. ಕೋಟಿಗಳು

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7,197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 375.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ /ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಫೆಬ್ರವರಿ 2016ರ ಮಾಹೆಗೆ ಒಟ್ಟು ಬಿಡುಗಡೆ | 399.89 |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 04.02.2016**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಫೆಬ್ರವರಿ 2016ರ ಮಾಹೆಗೆ ₹. 375.00 ಕೋಟಿಗಳ (ರೂ. ಮುನ್ನೂರ ಎಪ್ಪತ್ತೈದು

ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ)ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**₹. ಕೋಟಿಗಳು**

| ವಿದ್ಯುತ್ ಸರಬರಾಜು ಕಂಪನಿಗಳು | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2015–16ರ ಜನವರಿ 2016 ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 33.00 | 2.00 | 35.00 |
| ಮವಿಕಂ | 27.00 | 0.00 | 27.00 |
| ಹುವಿಕಂ | 151.00 | 4.00 | 155.00 |
| ಗುವಿಕಂ | 79.00 | 6.00 | 85.00 |
| ಚಾವಿಸನಿನಿ | 66.00 | 1.00 | 67.00 |
| ಹು.ಗ್ರಾ.ಸ.ಸಂ | 5.35 | 0.65 | 6.00 |
| **ಒಟ್ಟು** | **361.35** | **13.65** | **375.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು ಕ್ರಮವಾಗಿ ₹. 9.00 ಕೋಟಿ ಹಾಗೂ ₹. 7.01 ಕೋಟಿಗಳನ್ನು ಫೆಬ್ರವರಿ 2016ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು |
|---|---|---|---|
| ಬೆವಿಕಂ | 1.38 | 1.25 | 2.63 |
| ಮವಿಕಂ | 1.25 | 0.50 | 1.75 |
| ಗುವಿಕಂ | 3.77 | 4.13 | 7.90 |
| ಚಾವಿಸನಿನಿ | 2.60 | 1.13 | 3.73 |
| **ಒಟ್ಟು** | **9.00** | **7.01** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು 8.88 ಕೋಟಿಗಳನ್ನು ಫೆಬ್ರವರಿ 2016ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿಸಕಂಗಳು | ಒಟ್ಟು |
|---|---|
| ಬೆ.ವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1,2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯದನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ಫೆಬ್ರವರಿ 2016ರ ಮಾಹೆಗೆ ಸಹಾಯಧನ ಬಿಡುಗಡೆ | | | ಫೆಬ್ರವರಿ 2016ರ ಮಾಹೆಗೆ ಹೆಚ್ಚುವರಿ ಸಹಾಯಧನ ಮತ್ತು ಬಾಕಿ ಸಹಾಯಧನ ಬಾಬ್ತು ವಿಸಕಂಗಳಿಗೆ ಬಿಡುಗಡೆ | | | ಭಾ.ಜ್ಯೋ/ ಕು.ಜ್ಯೋತಿ ಬಾಕಿ ಮನ್ನಾ ಬಾಬ್ತು ಫೆಬ್ರವರಿ 2016ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂ ಗಳಿಗೆ | ಒಟ್ಟು |
|---|---|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | ಒಟ್ಟು | | | | |
| ಬೆ.ವಿಕಂ | 35.00 | 0.00 | **35.00** | 1.38 | 1.25 | ***2.63** | *2.50 | 40.13 | 0.00 | **40.13** |

| | | | | | | | | | | |
|---|---|---|---|---|---|---|---|---|---|---|
| ಮವಿಕಂ | 27.00 | 0.00 | **27.00** | 1.25 | 0.50 | ***1.75** | *1.00 | 29.75 | 0.00 | **29.75** |
| ಹುವಿಕಂ | 60.00 | 95.00 | **155.00** | 0.00 | 0.00 | **0.00** | 2.00 | 60.00 | 97.00 | **157.00** |
| ಗುವಿಕಂ | 63.00 | 22.00 | **85.00** | 3.77 | 4.13 | **7.90** | 0.50 | 63.00 | 30.40 | **93.40** |
| ಚಾವಿಸನಿನಿ | 46.00 | 21.00 | **67.00** | 2.60 | 1.13 | **3.73** | 2.88 | 46.00 | 27.61 | **73.61** |
| ಹು.ಗ್ರಾ.ಸ.ಸಂ | 0.00 | 6.00 | **6.00** | 0.00 | 0.00 | **0.00** | 0.00 | 0.00 | 6.00 | **6.00** |
| **ಒಟ್ಟು** | **231.00** | **144.00** | **375.00** | 9.00 | **7.01** | **16.01** | **8.88** | **238.88** | **161.01** | **399.89** |

* ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ ಹಾಗು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಮೊತ್ತವನ್ನು ಈ ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

5. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ₹. 60.00 ಕೋಟಿಗಳಲ್ಲಿ ₹. 30.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾನಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ವೆಚ್ಚಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

6. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ₹.6.00 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.

7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ₹.238.88 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ₹.103.00 ಕೋಟಿಗಳನ್ನು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ₹.30.40 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ₹.27.61 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

9. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

10. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸಕ್ಕದ್ದು,

11. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

12. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 1466 ವೆಚ್ಚ–1/15 ದಿನಾಂಕ: 20.01.2016ರಲ್ಲಿ ನೀಡಿರುವ ಸಹಮತಿಯನ್ವಯ ಜನವರಿ 2016ನೇ ಮಾಹೆಗೆ ಸಹಾಯಧನ ಬಿಡುಗಡೆಮಾಡಿದೆ.

**PR. 229**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನ ನಾಲ್ಕನೇ ತ್ರೈಮಾಸಿಕ್ಕೆ ಸರ್ಕಾರವು ವಿದ್ಯುತ್ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. 2015–16ನೇ ಸಾಲಿನ ಆಯವ್ಯಯ.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18.06.2015, 31.10.2015 ಮತ್ತು 25.01.2016.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015 ದಿನಾಂಕ: 26.06.2015.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 10 ಪಿಎಸ್‌ಆರ್ 2015/ಪಿ1 ದಿನಾಂಕ: 09.11.2015.

**ಪ್ರಸ್ತಾವನೆ :**

1) ಮೇಲಿನ ಕ್ರಸಂ.–1ರಲ್ಲಿ ಓದಲಾದ 2015–16ನೇ ಸಾಲಿನ ಆಯವ್ಯಯದಲ್ಲಿ ₹.727.02 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಈ ಕೆಳಕಂಡಂತೆ ಒದಗಿಸಲಾಗಿದೆ. ಲೆಕ್ಕಶೀರ್ಷಿಕೆ 4801–01–190–0–09–211(ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ₹.677.83 ಕೋಟಿಗಳನ್ನು ಲೆಕ್ಕಶೀರ್ಷಿಕೆ 4801–01–190–0–09–422(ಯೋಜನೆ)ಯಡಿ ವಿದ್ಯುತ್ ಬಳಕೆಯಲ್ಲಿ ಬಂಡವಾಳ ಹೂಡಿಕೆ– ಪರಿಶಿಷ್ಟ ಜಾತಿ ಉಪಯೋಜನೆಗಾಗಿ ₹.36.89 ಕೋಟಿಗಳು ಮತ್ತು ಲೆಕ್ಕಶೀರ್ಷಿಕೆ 4801–01–190–0–09–423(ಯೋಜನೆ) ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆ–ಗಿರಿಜನ ಉಪಯೋಜನೆಗಾಗಿ ₹.12.30 ಕೋಟಿಗಳನ್ನು ಒದಗಿಸಿದೆ. ಒಟ್ಟಾರೆ ಬಂಡವಾಳ ₹.727.02 ಕೋಟಿಗಳಾಗಿರುತ್ತದೆ.

2) ಮೇಲಿನ ಕ್ರಸಂ.–2ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿದೆ.

3) ದಿನಾಂಕ: 26.05.2015ರಂದು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಷತ್ತಿನ ಸಭೆಯಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ (SCSP) ಮತ್ತು ಗಿರಿಜನ ಉಪಯೋಜನೆಗೆ (TSP) ಒದಗಿಸಿರುವ ಮೊತ್ತವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿಗಳ ವಿದ್ಯುದ್ಧೀಕರಣಕ್ಕೆ ಮೂಲಸೌಕರ್ಯ ಒದಗಿಸಲು ಪರಿಷತ್ತಿನಲ್ಲಿ ಅನುಮೊದಿಸಿದೆ.

4) ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಮೇಲಿನ ಕ್ರಮ ಸಂಖ್ಯೆ(3) ಮತ್ತು (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಬಾಬ್ತು ಕ್ರಮವಾಗಿ ₹.36.89 ಮತ್ತು 12.30 ಕೋಟಿಗಳಲ್ಲಿ ₹.27.66 ಕೋಟಿಗಳನ್ನು ಮತ್ತು ₹.9.22 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.

5) ವಿದ್ಯುತ್ ಸರಬರಾಜು ಕಂಪನಿಗಳಿಗೆ ಮೊದಲ ಮೂರು ತ್ರೈಮಾಸಿಕಕ್ಕೆ ಬಿಡುಗಡೆ ಮಾಡಿರುವ ಮೊತ್ತಕ್ಕೆ ಸಾಧಿಸಿರುವ ಆರ್ಥಿಕ ಪ್ರಗತಿಯ ವಿವರಗಳು ಈ ಕೆಳಕಂಡಂತಿದೆ.

| ವಿಸಕಂಗಳು | ಎಸ್.ಸಿ.ಎಸ್.ಪಿ | | | ಟಿ.ಎಸ್.ಪಿ | | | ಒಟ್ಟು | | |
|---|---|---|---|---|---|---|---|---|---|
| | ಬಿಡುಗಡೆಯಾದ ಮೊತ್ತ | ಆರ್ಥಿಕ ಪ್ರಗತಿ | ಶೇಕಡವಾರು ಪ್ರಗತಿ | ಬಿಡುಗಡೆಯಾದ ಮೊತ್ತ | ಆರ್ಥಿಕ ಪ್ರಗತಿ | ಶೇಕಡವಾರು ಪ್ರಗತಿ | ಬಿಡುಗಡೆಯಾದ ಮೊತ್ತ | ಆರ್ಥಿಕ ಪ್ರಗತಿ | ಶೇಕಡವಾರು ಪ್ರಗತಿ |
| ಬೆವಿಕಂ | 6.75 | 6.75 | 100 | 1.50 | 1.50 | 100 | 8.25 | 8.25 | 100.00 |
| ಮವಿಕಂ | 2.85 | 1.73 | 60.70 | 0.90 | 0.35 | 39 | 3.75 | 2.08 | 55.47 |
| ಹುವಿಕಂ | 5.76 | 5.76 | 100.00 | 2.25 | 2.25 | 100 | 8.01 | 8.01 | 100.00 |
| ಗುವಿಕಂ | 7.80 | 7.80 | 100.00 | 3.07 | 3.07 | 100 | 10.87 | 10.87 | 100.00 |
| ಚಾವಿಸನಿನಿ | 4.50 | 4.50 | 100.00 | 1.50 | 1.50 | 100 | 6.00 | 6.00 | 100.00 |
| **ಒಟ್ಟು** | **27.66** | **26.54** | **95.95** | 9.22 | **8.67** | **94** | **36.88** | **35.21** | **95.47** |

6) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ದಿನಾಂಕ: 19.01.2016ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ 2015–16ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟ ಜಾತಿ ಮತ್ತು ಗಿರಿಜನ ಉಪಯೋಜನೆಗಳಿಗೆ ನಾಲ್ಕನೇ ತ್ರೈಮಾಸಿಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ಒಟ್ಟು ₹.12.31 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

ರೂ.ಕೋಟಿಗಳಲ್ಲಿ

| ಕ್ರಸಂ. | ಲೆಕ್ಕಶೀರ್ಷಿಕೆ | ಮೊತ್ತ |
|---|---|---|
| 1 | 4801–01–190–0–09–422 (SCSP) | 9.23 |
| 2 | 4801–01–190–0–09–423 (TSP) | 3.08 |
| | ಒಟ್ಟು | 12.31 |

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 16 ಪಿಎಸ್‌ಆರ್ 2015/ಪಿ1, ಬೆಂಗಳೂರು, ದಿನಾಂಕ: 10.02.2016**

1. 2015–16ನೇ ಸಾಲಿನ ನಾಲ್ಕನೇ ತ್ರೈಮಾಸಿಕ್ಕೆ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಲೆಕ್ಕಶೀರ್ಷಿಕೆ 4801–01–190–0–09–422–SCSP (ಯೋಜನೆ)ಯಡಿ ₹.9.23 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 4801–01–190–0–09–423– TSP (ಯೋಜನೆ)ಯಡಿ ₹.3.08

ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳ ವಿದ್ಯುದ್ದೀಕರಣಕ್ಕೆ ಮೂಲಸೌಕರ್ಯ ಒದಗಿಸಲು ಕೆಳಗಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ.ಕೋಟಿಗಳಲ್ಲಿ

| ಕ್ರ.ಸಂ. | ವಿದ್ಯುತ್ ಸರಬರಾಜು ಕಂಪನಿಗಳು | ಲೆಕ್ಕಶೀರ್ಷಿಕೆ | | ಒಟ್ಟು |
|---|---|---|---|---|
| | | 4801–01–190–0–09–422 (SCSP) | 4801–01–190–0–09–423 (TSP) | |
| 1 | ಬೆವಿಕಂ | 2.30 | 0.49 | 2.79 |
| 2 | ಮವಿಕಂ | 0.90 | 0.30 | 1.20 |
| 3 | ಹುವಿಕಂ | 1.74 | 0.75 | 2.49 |
| 4 | ಗುವಿಕಂ | 2.64 | 0.99 | 3.63 |
| 5 | ಚಾವಿಸನಿನಿ | 1.50 | 0.50 | 2.00 |
| 6 | ಹುಕ್ಕೇರಿ | 0.15 | 0.05 | 0.20 |
| | **ಒಟ್ಟು** | **9.23** | **3.08** | **12.31** |

2. ಮೇಲಿನ ಕೋಷ್ಟಕದಲ್ಲಿ ಸೂಚಿಸಿರುವ ಮೊತ್ತಕ್ಕೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ಮತ್ತು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರಿ ಸಂಘದರವರು ಪ್ರತಿ ಲೆಕ್ಕಶೀರ್ಷಿಕೆಗೆ ಪ್ರತ್ಯೇಕ ಸ್ವೀಕೃತಿ ರಸೀದಿ (Pay Receipts) ಮೇಲೆ ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು ಪಡೆದು ಹಣವನ್ನು ಪಡೆಯತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳು ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity) ವಾಗಿ ಬಳಸಿಕೊಂಡು, ಈ ಬಗ್ಗೆ ಬಳಕೆಯ ಪ್ರಮಾಣ ಪತ್ರ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.

4. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 18.06.2015, 31.10.2015 ಮತ್ತು 25.01.2016ರಲ್ಲಿ ನೀಡಿದೆ.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 02 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.04.2015, ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ಬೆಂಗಳೂರು, ದಿನಾಂಕ: 09.10.2015 ಮತ್ತು ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ಬೆಂಗಳೂರು, ದಿನಾಂಕ: 19.01.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**PR. 230**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ: 31.05.2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ: 19.12.2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2015 ದಿನಾಂಕ: 09.04.2015 (Delegation of Financial Powers).
4. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2015 ದಿನಾಂಕ: 09.10.2015. (Delegation of Financial Powers)
5. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016 ದಿನಾಂಕ: 19.01.2016. (Delegation of Financial Powers)
6. ಸರ್ಕಾರ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2015 ದಿನಾಂಕ; 02.05.2015, 18.05.2015, 04.06.2015, 06.07.2015, 05.08.2015, 01.09.2015, 15.10.2015, 09.11.2015 ಮತ್ತು 02.12.2015.
7. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ: ಕೆಇಪಿಜಿಟಿ/ಪಿ14/2015–16/811–15 ದಿನಾಂಕ: 16.12.2015.
8. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ: ಕೆಇಪಿಜಿಟಿ/ಪಿ14/2015–16/1005–09 ದಿನಾಂಕ: 12.02.2016.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ

ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂಧಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರವರಾಜು ಕಂಪನಿಗಳದ್ದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಗಳದ್ದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as you go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2015–16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ ಲೆಕ್ಕಶೀರ್ಷಿಕೆ "2801–80–101–1–13–106 (ಯೋಜನೇತರ)" ಯಡಿ ₹.550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ಈಗಾಗಲೇ ₹.411.00 ಕೋಟಿಗಳನ್ನು ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.

4. ಮೇಲೆ (7)ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ನ ಪತ್ರದಲ್ಲಿ ಜನವರಿ ಮತ್ತು ಫೆಬ್ರವರಿ 2016ರ ಮಾಹೆಗೆ ₹.146.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015–16ನೇ ಸಾಲಿನ ಜನವರಿ ಮತ್ತು ಫೆಬ್ರವರಿ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹.92.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 18.02.2016.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಜನವರಿ ಮತ್ತು ಫೆಬ್ರವರಿ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹.92.00 ಕೋಟಿ (ತೊಂಬತ್ತೆರಡು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilision Certificate)ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ಬೆಂಗಳೂರು ದಿನಾಂಕ: 19.01.2016ರಲ್ಲಿ ನಾಲ್ಕನೇ ತ್ರೈಮಾಸಿಕಕ್ಕೆ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**PR. 231**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿನ ಯೋಜನೆ ಶೀರ್ಷಿಕೆಯಡಿಯಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳಿ ಇದರ ಬೆಳಗಾವಿ ತರಬೇತಿ ಕೇಂದ್ರದ ನಿರ್ಮಾಣಕ್ಕಾಗಿ ಮಂಜೂರಾಗಿರುವ ಅನುದಾನ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಇ 108 ಸಂಮಾಸ 2014, ದಿನಾಂಕ: 25–08–2014 ಹಾಗೂ ದಿನಾಂಕ : 07–01–2015.
2) ಸರ್ಕಾರದ ಆದೇಶ ಸಂಖ್ಯೆ : ಸಿಒ 119 ಸಂಮಾಸ 2015, ದಿನಾಂಕ: 14–12–2015.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಅನಿ/ಕೈಸಸಂ–2/45/2014–15, ದಿನಾಂಕ: 28–01–2016.
4) ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಹೈ) ಇವರ ಪತ್ರ ಸಂಖ್ಯೆ:ಅನಿ/ಕೈ.ಸ.ಸಂ/1/45/2015–16. ದಿ:06–02–2016.
5) ಸರ್ಕಾರದ ಆದೇಶ **ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2016 ದಿ: 19–1–2016.**

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಆದೇಶದನ್ವಯ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳದ ತರಬೇತಿ ಕೇಂದ್ರದ ನಿರ್ಮಾಣಕ್ಕಾಗಿ 2014–15ನೇ ಸಾಲಿನ ಆಯವ್ಯಯದಲ್ಲಿ ಅವಕಾಶ ಕಲ್ಪಿಸಿರುವ ₹. 77.01 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿ., ಬೆಂಗಳೂರು ಇದರ ಬೆಳಗಾವಿ ತರಬೇತಿ ಕೇಂದ್ರದ ಕಟ್ಟಡ ನಿರ್ಮಾಣದ ಕಾಮಗಾರಿಗೆ 2015–16ನೇ ಸಾಲಿನ ಆಯವ್ಯಯದ **ಲೆಕ್ಕ ಶೀರ್ಷಿಕೆ 4425–00–108–0–73–059 (ಯೋಜನೆ)ರಡಿಯಲ್ಲಿ** ಅವಕಾಶ ಕಲ್ಪಿಸಿರುವ ₹. 60.00 ಲಕ್ಷಗಳ/ಪೈಕಿ ಒಂದನೇ ಮತ್ತು ಎರಡನೇ ಕಂತಿನ ಹಣ ₹. 30.00 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (3) ಮತ್ತು (4)ರ ಸಹಕಾರ ಸಂಘಗಳ ನಿಬಂಧಕರ ಪತ್ರಗಳಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿ., ಬೆಂಗಳೂರು ಇದರ ಬೆಳಗಾವಿ ತರಬೇತಿ ಕೇಂದ್ರದ ಕಟ್ಟಡ ನಿರ್ಮಾಣದ ಕಾಮಗಾರಿಗೆ 2015–16 ನೇ ಸಾಲಿನ ಆಯವಯ್ಯದಲ್ಲಿ ಅವಕಾಶ ಕಲ್ಪಿಸಿರುವ ₹ 60.00 ಲಕ್ಷಗಳ ಪೈಕಿ ಬಿಡುಗಡೆಗೆ ಬಾಕಿ ಇರುವ ₹. 30.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಹಾಗೂ ಕಟ್ಟಡ ನಿರ್ಮಾಣ ಕಾರ್ಯ ಪ್ರಗತಿಯಲ್ಲಿರುವುದಾಗಿ ಮತ್ತು ಇದಕ್ಕಾಗಿ ಈಗಾಗಲೇ ₹. 127.92 ಲಕ್ಷ ವೆಚ್ಚವಾಗಿರುವುದಾಗಿ, ಈ ಹಿಂದೆ ಬಿಡುಗಡೆಯಾಗಿರುವ ₹. 30.00 ಲಕ್ಷ ಬಳಕೆಯಾಗಿರುವುದಾಗಿ ಕಟ್ಟಡ ಕಾಮಗಾರಿ ಪ್ರಗತಿಯ ಛಾಯಾ ಚಿತ್ರಗಳನ್ನು ಹಾಜರುಪಡಿಸಿರುತ್ತಾರೆ.

ಮೇಲೆ ಓದಲಾದ (5)ರ ಸರ್ಕಾರದ ಆದೇಶದಲ್ಲಿ ಆಯವ್ಯಯದ ಅವಕಾಶದಲ್ಲಿ 4ನೇ ಕಂತನ್ನು ಬಿಡುಗಡೆ ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿದೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 119 ಸಂಮಾಸ 2015, ಬೆಂಗಳೂರು, ದಿನಾಂಕ: 02–03–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ಇದರ ಬೆಳಗಾವಿ ತರಬೇತಿ ಕೇಂದ್ರ ಕಟ್ಟಡದ ನಿರ್ಮಾಣಕ್ಕಾಗಿ 2015–16ನೇ ಸಾಲಿನ ಆಯವ್ಯಯ **ಲೆಕ್ಕ ಶೀರ್ಷಿಕೆ 4425–00–108–0–73–059** (ಯೋಜನೆ) ರಡಿಯಲ್ಲಿ ಅವಕಾಶ ಕಲ್ಪಿಸಿರುವ ₹.60.00 ಲಕ್ಷಗಳ ಪೈಕಿ ಬಿಡುಗಡೆಗೆ ಬಾಕಿ ಇರುವ ₹.30.00 (ರೂಪಾಯಿ ಮೂವತ್ತು ಲಕ್ಷಗಳು ಮಾತ್ರ) ಗಳನ್ನು ಮೂರನೇ ಹಾಗೂ ನಾಲ್ಕನೇ ಕಂತುಗಳಾಗಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ಬಿಡುಗಡೆಗೊಳಿಸಿ ಆದೇಶಿಸಿದೆ.

**ಷರತ್ತುಗಳು :–**

1. 2015–16ನೇ ಸಾಲಿನ ಲೆಕ್ಕ ಶೀರ್ಷಿಕೆ 4425–00–108–0–73–059 (ಯೋಜನೆ) ರಡಿಯಲ್ಲಿ ಈ ಅನುದಾನದ ವೆಚ್ಚವನ್ನು ಭರಿಸತಕ್ಕದ್ದು.
2. ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿ., ಇವರು ಯೋಜನೆಯಲ್ಲಿ ಪಡೆದ ಹಣವನ್ನು ಯೋಜನೆಯ ಪ್ರಗತಿಗನುಗುಣವಾಗಿ ಬಿಡುಗಡೆ ಮಾಡುವುದು.
3. ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತ ಬೆಂಗಳೂರು, ಇವರು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಸಹಕಾರ ಸಂಘಗಳ ನಿಬಂಧಕರು ಪರಾಮರ್ಶೆ ಮಾಡತಕ್ಕದ್ದು. ಮತ್ತು ಯೋಜನೆಯಲ್ಲಿ ಬಿಡುಗಡೆಯಾದ ಒಟ್ಟು ಅನುದಾನದ ವಿನಿಯೋಗದ ಬಗ್ಗೆ, ಸಮಗ್ರ ಬಳಕೆ ಪ್ರಮಾಣ ಪತ್ರವನ್ನು ಪಡೆದು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ಮಂಜೂರು ಮಾಡಿದ ಅನುದಾನದ ₹. 30.00 ಲಕ್ಷ (ಮೂವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ) ನಿಬಂಧಕರ ಕಛೇರಿ, ಬೆಂಗಳೂರು, ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ರುಜುವಿನೊಂದಿಗೆ ಖಜಾನೆಯಿಂದ ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಅಧಿಕಾರ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2016, ದಿನಾಂಕ: 19–01–2016 ರನ್ವಯ ಸರ್ಕಾರದ ಕಾರ್ಯದರ್ಶಿ ಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**P.R.214**

**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ ,**
ಸರ್ಕಾರದ ಅಧೀನ ಕಾರ್ಯದರ್ಶಿ –3,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿನ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ" ಸಂಘಗಳಿಗೆ ಬಂಡವಾಳ ನೆರವು ಯೋಜನೆ"ಯಡಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದಿಂದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಸಿಒ 118 ಸಂಮಾಸ 2015, ದಿ: 19–11–2015 ಹಾಗೂ 30–12–2015.
2) ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2016, ದಿ: 19.01.2016.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಎಂಕೆಟಿ–1/104/2015–16. ದಿ: 05–02–2016 ಮತ್ತು ಪತ್ರ ಸಂಖ್ಯೆ: ಆರ್‌ಸಿಎಸ್/ಎಂಕೆಟಿ–1/104/2015–16. ದಿ: 15–02–2016 ಹಾಗೂ ದಿ: 25–2–2016.

**ಪ್ರಸ್ತಾವನೆ:–**

2015–16ನೇ ಸಾಲಿಗೆ ಸಹಕಾರ ಇಲಾಖೆಯಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಗ್ರಾಹಕರ ಮಾರುಕಟ್ಟೆ ಮತ್ತು ಸಂಸ್ಕರಣ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ" ಲೆಕ್ಕ ಶೀರ್ಷಿಕೆ 4425–00–108–0–57–100 ರಡಿಯಲ್ಲಿ ಆಯವ್ಯಯದಲ್ಲಿ ₹.140.00 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಮೇಲೆ ಓದಲಾದ (1) ರ ಸರ್ಕಾರದ ದಿನಾಂಕ: 30–12–2015ರ ಆದೇಶದಲ್ಲಿ ಆಯವ್ಯಯ ಅವಕಾಶ ₹.140.00 ಲಕ್ಷಗಳ ಪೈಕಿ ಮೊದಲನೆಯ ಮತ್ತು ಎರಡನೆಯ ತ್ರೈಮಾಸಿಕ ಕಂತು ಮೊತ್ತವಾಗಿ ಹತ್ತು ಸಹಕಾರ ಸಂಘಗಳಿಗೆ ತಲಾ ₹.7.00 ಲಕ್ಷಗಳಂತೆ ₹.70.00 ಲಕ್ಷಗಳನ್ನು ಬಿಡುಗಡೆಗೊಳಿಸಿದೆ.

ಮೇಲೆ ಓದಲಾದ (3) ರ ಸಹಕಾರ ಸಂಘಗಳ ನಿಬಂಧಕರ ದಿನಾಂಕ: 05.02.2016 ಹಾಗೂ 15.02.2016ರ ಪತ್ರಗಳಲ್ಲಿ ಬಾಕಿ ಉಳಿದಿರುವ ₹.70.00 ಲಕ್ಷಗಳನ್ನು ಓದಲಾದ (1) ರ ಆದೇಶದಲ್ಲಿ ಬಿಡುಗಡೆ ಮಾಡಿರುವ ಹತ್ತು ಸಂಘಗಳಿಗೆ ಬಾಕಿ ಇರುವ ತಲಾ ₹.3.00 ಲಕ್ಷಗಳನ್ನು ಹಾಗೂ ಹೊಸದಾಗಿ ಆಯ್ಕೆಯಾಗಿರುವ ಸಿಂದಗಿ, ಅರಕಲಗೂಡು, ಸೇಡಂ ಮತ್ತು ಔರಾದ್ ಟಿಎಪಿಸಿಎಂಎಸ್‌ಗಳಿಗೆ ತಲಾ ₹.10.00 ಲಕ್ಷದಂತೆ ₹.40.00 ಲಕ್ಷ ಹೀಗೆ ಒಟ್ಟು ₹. 70.00 ಲಕ್ಷಗಳನ್ನು ಬಾಕಿ ಇರುವ ಮೊತ್ತದಿಂದ ಬಿಡುಗಡೆಗೊಳಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿದ್ದು ಈಗಾಗಲೇ ಬಿಡುಗಡೆಗೊಳಿಸಿರುವ ₹. 70.00 ಲಕ್ಷಗಳಿಗೆ ಬಳಕೆ ಪ್ರಮಾಣ ಪತ್ರವನ್ನು ದಿ: 25.02.2016ರ ಪ್ರಸಾವೆಯಲ್ಲಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ರ ಸರ್ಕಾರದ ಆದೇಶದ ಕಂಡಿಕೆ (12) ರಲ್ಲಿ ಹಿಂದೆ ಬಿಡುಗಡೆ ಮಾಡಿರುವ ಕಂತುಗಳಲ್ಲಿ ಶೆ. 75% ರಷ್ಟು ಮೊತ್ತ ಬಳಕೆ ಆಗಿದ್ದಲ್ಲಿ 4ನೇ ಕಂತಿನ ಮೊತ್ತ ಬಿಡುಗಡೆಗೊಳಿಸಲು ಸರ್ಕಾರದ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಪ್ರಸಕ್ತ ಪ್ರಕರಣದಲ್ಲಿ ಹಿಂದೆ ಬಿಡುಗಡೆಯಾಗಿರುವ ₹. 70.00 ಲಕ್ಷಗಳಿಗೆ ಶೇ 100 ರಷ್ಟು ಬಳಕೆಯಾಗಿರುವ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ನಿಬಂಧಕರು ಒದಗಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 118 ಸಂಮಾಸ 2015, ಬೆಂಗಳೂರು ದಿನಾಂಕ: 29–02–2016.**

ಪ್ರಸ್ತಾವನೆಯಲ್ಲಿ ವಿವರಿಸುವ ಅಂಶಗಳ ಹಿನ್ನೆಲೆಯಲ್ಲಿ, ಈ ಯೋಜನೆಯಲ್ಲಿ ಬಿಡುಗಡೆಗೆ ಬಾಕಿ ಇರುವ ₹.70.00 ಲಕ್ಷಗಳನ್ನು ಈ ಕೆಳಗಿನ ಕೋಷ್ಠಕದಲ್ಲಿನ ಕ್ರಮ ಸಂಖ್ಯೆ 01 ರಿಂದ 10ರವರೆಗಿನ ಸಹಕಾರ ಸಂಘಗಳಿಗೆ ಬಿಡುಗಡೆಗಾಗಿ ಬಾಕಿ ಇರುವ ತಲಾ ₹.3.00 ಲಕ್ಷದಂತೆ ₹..30.00 ಲಕ್ಷ ಮತ್ತು ಕ್ರಮ ಸಂಖ್ಯೆ 11 ರಿಂದ 14 ರವರೆಗೆ ತಲಾ ₹.10.00 ಲಕ್ಷದಂತೆ ₹.40.00 ಲಕ್ಷ ಹೀಗೆ ಒಟ್ಟು ₹.70.00 ಲಕ್ಷಗಳು (ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) 3ನೇ ಮತ್ತು 4ನೇ ಕಂತಿನ ಮೊತ್ತವಾಗಿ ಬಿಡುಗಡೆಗೊಳಿಸಿದೆ.

(₹.ಲಕ್ಷಗಳಲ್ಲಿ)

| ಕ್ರ. ಸಂ. | ಸಂಘದ ಹೆಸರು | ಬಿಡುಗಡೆಗೊಳಿಸುವ ಮೊತ್ತ |
|---|---|---|
| 01 | ಬೇಲೂರು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಹಾಸನ ಜಿಲ್ಲೆ. | 03.00 |
| 02 | ಅರಸೀಕೆರೆ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಹಾಸನ ಜಿಲ್ಲೆ | 03.00 |
| 03 | ಸೊರಬ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಶಿವಮೊಗ್ಗ ಜಿಲ್ಲೆ. | 03.00 |
| 04 | ಹೊನ್ನಾವರ ತಾಲ್ಲೂಕು ವ್ಯವಸಾಯೋತ್ಪನ್ನ ಸಹಕಾರ ಸಂಘ ನಿ., ಉತ್ತರ ಕನ್ನಡ ಜಿಲ್ಲೆ. | 03.00 |
| 05 | ದಿ ಜನತಾ ಕನ್ಸೂಮರ್ ಕೋ ಆಪ್ ಹೋಲ್‌ಸೇಲ್ ಸ್ಟೋರ್ಸ್ ಲಿ., ಜಮಖಂಡಿ (ಜನತಾ ಬಜಾರ್) ಬಾಗಲಕೋಟೆ ಜಿಲ್ಲೆ. | 03.00 |
| 06 | ಬಾದಾಮಿ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ. ನಿ., ಬಾಗಲಕೋಟೆ ಜಿಲ್ಲೆ. | 03.00 |
| 07 | ಹರಿಹರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ. ನಿ., ದಾವಣಗೆರೆ ಜಿಲ್ಲೆ. | 03.00 |
| 08 | ಶ್ರೀ ಸಿದ್ದಾರೂಡ ತೋಟಗಾರಿಕೆ ಬೆಳೆಗಾರರ ಉತ್ಪಾದಕರ ಸಂಸ್ಕರಣ ಹಾಗೂ ಮಾರಾಟ ಸಹಕಾರ ಸಂಘ ನಿ., ತುಕ್ಕಾನಟ್ಟಿ ಬೆಳಗಾವಿ ಜಿಲ್ಲೆ | 03.00 |
| 09 | ಶಿಗ್ಗಾಂವ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ನಿ., ಬಂಕಾಪುರ ಹಾವೇರಿ ಜಿಲ್ಲೆ. | 03.00 |
| 10 | ದಿ ಬ್ಯಾಡಗಿ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ನಿ., ಬ್ಯಾಡಗಿ, ಹಾವೇರಿ ಜಿಲ್ಲೆ. | 03.00 |
| 11 | ಸಿಂದಗಿ ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ನಿ., ಸಿಂದಗಿ, ವಿಜಯಪುರ ಜಿಲ್ಲೆ. | 10.00 |
| 12 | ಅರಕಲಗೂಡು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಹಾಸನ ಜಿಲ್ಲೆ. | 10.00 |
| 13 | ಸೇಡಂ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಕಲಬುರಗಿ ಜಿಲ್ಲೆ. | 10.00 |
| 14 | ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ನಿ., ಔರಾದ, ಬೀದರ್ ಜಿಲ್ಲೆ. | 10.00 |
| | **ಒಟ್ಟು** | 70.00 |

"ಈ ವೆಚ್ಚವನ್ನು 2015–16ನೇ ಸಾಲಿನ ಆಯ–ವ್ಯಯದ **ಲೆಕ್ಕ ಶೀರ್ಷಿಕೆ 4425–00–108–0–57–100"** ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಎಲ್ಲಾ 14 ಸಹಕಾರ ಸಂಘಗಳಿಂದ ಕ್ರೋಡೀಕರಿಸಿ ಧೃಡೀಕರಿಸಿ ಸರ್ಕಾರಕ್ಕೆ ಮತ್ತು ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು."

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2015, ದಿ:09–10–2015ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

P.R.215

SC-50

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ –3,

ಸಹಕಾರ ಇಲಾಖೆ.

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಪಂಡಿತ್ ಪಂಚಾಕ್ಷರಿ ಗವಾಯಿಗಳವರ ಶಿಕ್ಷಣ ಮಹಾವಿದ್ಯಾಲಯ, ಗದಗ, ಈ ಶಿಕ್ಷಣ ಮಹಾವಿದ್ಯಾಲಯವನ್ನು ಅನುದಾನಕ್ಕೆ ಒಳಪಡಿಸುವ ಬಗ್ಗೆ.

**ಓದಲಾಗಿದೆ :**

1. ಅಧ್ಯಕ್ಷರು, ಡಾ॥ ಪುಟ್ಟರಾಜ ಗವಾಯಿಗಳವರ ಅಂಧರ ಶಿಕ್ಷಣ ಸಮಿತಿ, ಗದಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿ ದಿನಾಂಕ 10–1–2014.
2. ಕಾಲೇಜು ಶಿಕ್ಷಣ ನಿರ್ದೇಶಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಾಶಿಇ/ಶಿತ3/ಅನುದಾನ–2/2011–12/ಬಿ.ಇಡಿ., ದಿನಾಂಕ 19–9–2014.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 6 ವಿವಿಧ 2001, ದಿನಾಂಕ 12–10–2001.

ಪ್ರಸ್ತಾವನೆ :

ಮೇಲೆ ಓದಲಾದ (1)ರ ದಿ: 10–1–2014 ರ ಮನವಿಯಲ್ಲಿ, ಕನ್ನಡ ನಾಡಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಶೈಕ್ಷಣಿಕ ಶ್ರೇಯೋಭಿವೃದ್ಧಿಗಾಗಿ ತಮ್ಮ ದೇಹವನ್ನೇ ಮುಡುಪಾಗಿಟ್ಟು ಗದಗಿನ ತ್ರಿಭಾಷಾ ಕವಿ ಸಂಗೀತ ದಿಗ್ಗಜರಾದ ಪದ್ಮಭೂಷಣ ಡಾ॥ ಪಂಡಿತ್ ಪುಟ್ಟರಾಜ ಗವಾಯಿಗಳವರು ಸ್ಥಾಪಿಸಿದ ಪಂಡಿತ್ ಪಂಚಾಕ್ಷರ ಗವಾಯಿಗಳವರ ಶಿಕ್ಷಣ ಮಹಾವಿದ್ಯಾಲಯವು 2004ರಿಂದ ಸರ್ಕಾರದ ಅನುದಾನವಿಲ್ಲದೆ ಯಶಸ್ವಿಯಾಗಿ ಮುನ್ನಡೆಯುತ್ತಿದ್ದು, ಸದ್ಯ ಮಹಾವಿದ್ಯಾಲಯದಲ್ಲಿ 100 ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದು, ಸಿಬ್ಬಂದಿ ವರ್ಗದವರು ಆಡಳಿತ ಮಂಡಳಿಯು ನೀಡುತ್ತಿರುವ ಅಲ್ಪ ಗೌರವ ಧನ ಪಡೆದು ಸೇವೆ ಸಲ್ಲಿಸುತ್ತಿದ್ದಾರೆ. ಪೂಜ್ಯರಾದ ಡಾ। ಪಂಡಿತ್ ಪುಟ್ಟರಾಜ ಗವಾಯಿಗಳವರು ಲಿಂಗೈಕ್ಯರಾದ ನಂತರ ಸಿಬ್ಬಂದಿ ವರ್ಗದವರಿಗೆ ಸಂಭಾವನೆ ನೀಡುವಲ್ಲಿ ತೊಂದರೆಯಾಗುತ್ತಿರುವ ಕಾರಣ ಶಿಕ್ಷಣ ಮಹಾವಿದ್ಯಾಲಯವನ್ನು ವಿಶೇಷ ಪ್ರಕರಣದಡಿಯಲ್ಲಿ ವೇತನಾನುದಾನಕ್ಕೆ ಒಳಪಡಿಸುವಂತೆ ಅಧ್ಯಕ್ಷರು, ಡಾ॥ ಪುಟ್ಟರಾಜ ಗವಾಯಿಗಳವರ ಅಂಧರ ಶಿಕ್ಷಣ ಸಮಿತಿ, ಗದಗ, ಇವರು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ (2)ರ ದಿ: 19–9–2014ರ ಪತ್ರದಲ್ಲಿ ಕಾಲೇಜು ಶಿಕ್ಷಣ ನಿರ್ದೇಶಕರು, ಬೆಂಗಳೂರು, ಇವರು ಪಂಡಿತ್ ಪಂಚಾಕ್ಷರಿ ಗವಾಯಿಗಳವರ ಶಿಕ್ಷಣ ಮಹಾವಿದ್ಯಾಲಯ, ಗದಗ, ಈ ಶಿಕ್ಷಣ ಮಹಾವಿದ್ಯಾಲಯವನ್ನು ಅನುದಾನಕ್ಕೆ ಒಳಪಡಿಸುವ ಕುರಿತು ಪ್ರಾದೇಶಿಕ ಜಂಟಿ ನಿರ್ದೇಶಕರು, ಧಾರವಾಡ, ಇವರು ಮೇಲ್ಕಂಡ ಕಾಲೇಜಿಗೆ ಭೇಟಿ ನೀಡಿ ಕಾಲೇಜಿನಲ್ಲಿ ಶೈಕ್ಷಣಿಕ ಕಾರ್ಯಚಟುವಟಿಕೆ ಹಾಗೂ ಮೂಲಭೂತ ಸೌಕರ್ಯಗಳ ಬಗ್ಗೆ ದಾಖಲೆ ಮತ್ತು ಸ್ಥಳ ಪರಿಶೀಲನೆ ಮಾಡಿದ್ದು ಉತ್ತಮ ಪರಿಸರ ಹೊಂದಿರುವುದು ಹಾಗೂ ಡಿಎಸ್.ಇ.ಆರ್.ಟಿ. ನಿಯಮದಂತೆ ಎಲ್ಲಾ ಇತರೆ ಅಗತ್ಯ ಮೂಲಭೂತ ಸೌಕರ್ಯಗಳನ್ನು ಹೊಂದಿರುವುದು, ನಿಯಮಾನುಸಾರ ಶೈಕ್ಷಣಿಕ ಚಟುವಟಿಕೆಗಳು ನಡೆದು ಉತ್ತಮ ಫಲಿತಾಂಶ ಇರುವುದು ಕಂಡುಬಂದಿರುತ್ತದೆಯೆಂದು ಸಲ್ಲಿಸಿರುವ ವರದಿಯ ಆಧಾರದ ಮೇಲೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ 100 ವಿದ್ಯಾರ್ಥಿ ಪ್ರಮಾಣ ಹೊಂದಿದ ಒಂದು ಶಿಕ್ಷಣ ಮಹಾವಿದ್ಯಾಲಯಕ್ಕೆ ಒಂದು ಪ್ರಾಂಶುಪಾಲರು ಮತ್ತು 09 ಉಪನ್ಯಾಸಕರು ಸೇರಿದಂತೆ ಒಟ್ಟು 10 ಬೋಧಕ ಹಾಗೂ 17 ವಿವಿಧ ಬೋಧಕೇತರ ಹುದ್ದೆಗಳನ್ನು ನಿಗದಿಪಡಿಸಲಾಗಿದೆ.

ಮೇಲ್ಕಂಡ ಅಂಶಗಳನ್ನು ಕೂಲಕಂಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 313 ಯುಆರ್‌ಸಿ 2014, ಬೆಂಗಳೂರು, ದಿನಾಂಕ: 8–10–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗದಗ್‌ನ ಪಂಡಿತ್ ಪಂಚಾಕ್ಷರಿ ಗವಾಯಿಗಳವರ ಸಂಸ್ಥೆಯು ಅಂಧರ ಶಿಕ್ಷಣ ಸಂಸ್ಥೆಯಾಗಿದ್ದು, ಸದರಿ ಶಿಕ್ಷಣ ಸಮಿತಿಯು ಶಿಕ್ಷಣ ಮಹಾವಿದ್ಯಾಲಯವನ್ನು ನಡೆಸುತ್ತಿರುವುದರಿಂದ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಈ ಶಿಕ್ಷಣ ಮಹಾವಿದ್ಯಾಲಯದಲ್ಲಿನ ನಿಗದಿತ ಸಿಬ್ಬಂದಿ ಮಾದರಿಯಲ್ಲಿ ನಿಯಮಾನುಸಾರ ವಿದ್ಯಾರ್ಹತೆ ಹೊಂದಿದ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ವೇತನವನ್ನು 2015–16ನೇ ಸಾಲಿನ ಆಯವ್ಯಯದ ಪೂರಕ ಅಂದಾಜು–2 ರಲ್ಲಿ ಸರ್ಕಾರೇತರ ಕಾಲೇಜುಗಳಿಗೆ ಮತ್ತು ಸಂಸ್ಥೆಗಳಿಗೆ ಸಹಾಯ ಲೆಕ್ಕಶೀರ್ಷಿಕೆ 2202–03–104–1–01–101 ಸಹಾಯಾನುದಾನ–ವೇತನಗಳು (ಯೋಜನೆ) ಅಡಿ ಒದಗಿಸಲಾಗುವ ₹.10.00 ಕೋಟಿಗಳನ್ನು (ಹತ್ತು ಕೋಟಿ ರೂಪಾಯಿಗಳು ಮಾತ್ರ) ಕಾರ್ಪಸ್ ನಿಧಿಯಾಗಿ Corpus Fund ಇಲಾಖೆಯ ವಿಭಾಗ ಮಟ್ಟದ ಅಧಿಕಾರಿ (ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ) ಹಾಗೂ ಸಂಸ್ಥೆಯ ಹೆಸರಿನಲ್ಲಿ ಜಂಟಿ ಠೇವಣಿ ಮಾಡಿ ಸದರಿ ಠೇವಣಿಯಿಂದ ಲಭ್ಯವಾಗುವ ವಾರ್ಷಿಕ ಬಡ್ಡಿ ಮೊತ್ತದ ಹಣದಿಂದ ವೇತನ ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಹಾಗೂ ಬೈಲಾವನ್ನು ರಚಿಸಿಕೊಂಡು ಕಾರ್ಯನಿರ್ವಹಿಸಲು ಆದೇಶಿಸಿದೆ.

**ಬೋಧಕ ಸಿಬ್ಬಂದಿಗಳು**

| ಕ್ರ.ಸಂ | ಹೆಸರು | ಹುದ್ದೆ |
|---|---|---|
| 1 | ವಿರೇಶ ಅಂ. ಹಿತ್ತಲಮನಿ | ಪ್ರಾಚಾರ್ಯರು |
| 2 | ಎನ್.ಎನ್. ಕಿಂದ್ರಿ | ಉಪನ್ಯಾಸಕರು |
| 3 | ಎಂ.ಬಿ. ಮಡ್ಡಿ | ಉಪನ್ಯಾಸಕರು |
| 4 | ಡಿ.ಎಸ್. ಶಿಗ್ಲಿ | ಉಪನ್ಯಾಸಕರು |

| ಕ್ರ.ಸಂ | ಹೆಸರು | ಹುದ್ದೆ |
|---|---|---|
| 5 | ಆರ್.ಜಿ. ಚಿಕ್ಕಮಠ | ಉಪನ್ಯಾಸಕರು |
| 6 | ಆರ್.ಎಂ. ಕುಲಕರ್ಣಿ | ಉಪನ್ಯಾಸಕರು |
| 7 | ಆರ್.ಎಫ್. ಹೂಗಾರ | ಉಪನ್ಯಾಸಕರು |
| 8 | ಜೆ.ಎಸ್. ಇಟಗಿ | ಉಪನ್ಯಾಸಕರು |
| 9 | ಶುಭಾ ಎಸ್.ಜೆ. | ಉಪನ್ಯಾಸಕರು |
| 10 | ಎ.ಎಸ್. ಜಂಬಣ್ಣವರ್ | ಉಪನ್ಯಾಸಕರು |

**ಬೋಧಕೇತರ ಸಿಬ್ಬಂದಿಗಳು**

| ಕ್ರ.ಸಂ | ಹೆಸರು | ಹುದ್ದೆ |
|---|---|---|
| 1 | ಎ.ಎಂ. ಬಶೆಟ್ಟಿಯವರ | ಪ್ರ.ದ.ಸ /ಹೆಡ್ ಕ್ಲರ್ಕ್ |
| 2 | ಪಿ.ವ್ಹಿ. ಮಾಳೇಕೊಪ್ಪ ಮಠ | ಪ್ರ.ದ.ಸ |
| 3 | ಸಿ.ಆರ್. ವಸ್ತ್ರದ | ಗ್ರಂಥಾಲಯ ಸಹಾಯಕರು |
| 4 | ರುದ್ರಯ್ಯ ಕೆ. | ಸಿ.ಸಿ.ಟಿ. |
| 5 | ಸಿ.ಆರ್. ದೊಡ್ಡಮನಿ | ಸಿ.ಸಿ.ಟಿ |
| 6 | ಜೆ.ಬಿ. ಹೂಗಾರ | ಟೆಕ್ನಿಷಿಯನ್ ಫಿಲ್ಮಿ ಆಪರೇಟರ್ |
| 7 | ಎಸ್.ಎನ್. ಹೊಸಮನಿ | ಗ್ರಂಥಪಾಲಕರು |
| 8 | ಪ್ರತಿಭಾ. ಎಸ್ ಜೋಗಿ | ದೈಹಿಕ ಶಿಕ್ಷಣ ನಿರ್ದೇಶಕರು |
| 9 | ಪಿ.ಆರ್. ಹಿರೇಮಠ | ಅಟೆಂಡರ್ |
| 10 | ಬಿ.ಟಿ. ಕುಂಬಾರ್ | ಅಟೆಂಡರ್ |
| 11 | ಎನ್.ಬಿ. ದೇವಗಣ್ಣವರ | ಅಟೆಂಡರ್ |
| 12 | ಬಿ.ಎಸ್. ವಜ್ಜಲದ | ಸಿಪಾಯಿ |
| 13 | ಎಸ್.ಎಸ್. ಬಡಿಗೇರ | ಸ್ವೀಪರ್ |
| 14 | ಜೆ.ಎಸ್. ಕೆಂಚಣ್ಣವರ | ಸಿಪಾಯಿ |
| 15 | ಎಸ್.ಜೆ. ಹಿರೇಮಠ | ಸಿಪಾಯಿ |
| 16 | ಎಂ.ಸಿ. ಪಾಟೀಲ್ | ಸಿಪಾಯಿ |
| 17 | ಸಿ.ಎನ್. ಹಿರೇಮಠ | ಕಾವಲುಗಾರ |

**ಷರತ್ತುಗಳು:–**

1. ಸದರಿ ಆದೇಶಕ್ಕೆ ಸಂಬಂಧಿಸಿದಂತೆ ಕಾಲೇಜಿನ ಆಡಳಿತ ಮಂಡಳಿ ಮತ್ತು ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಧಾರವಾಡ, ಇವರ ನಡುವೆ Memorandum of Understanding (MOU) ಮಾಡಿಕೊಳ್ಳತಕ್ಕದ್ದು.
2. ಸದರಿ ಕಾಲೇಜಿನ ಸಿಬ್ಬಂದಿಗಳ ವೇತನ ಬಟವಾಡೆಗೆ ಆಡಳಿತ ಮಂಡಳಿಯ ಕಾರ್ಯಾಧ್ಯಕ್ಷರು ಹಾಗೂ ಜಂಟಿ ಕಾರ್ಯದರ್ಶಿಗಳು ಮತ್ತು ಸರ್ಕಾರದ ಪರವಾಗಿ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಧಾರವಾಡ, ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಜಂಟಿ ಖಾತೆ ತೆರೆಯುವುದು.
3. ಬ್ಯಾಂಕ್‍ನಲ್ಲಿ ನಿಶ್ಚಿತ ಠೇವಣಿಯಾಗಿರಿಸಿರುವ (ಫಿಕ್ಸೆಡ್ ಡಿಪಾಸಿಟ್) ₹.10.00 ಕೋಟಿಯಿಂದ ಬರುವ ವಾರ್ಷಿಕ ಬಡ್ಡಿ ಹಣವನ್ನು ಡ್ರಾ ಮಾಡುವ ಸಂದರ್ಭದಲ್ಲಿ ಪ್ರಾದೇಶಿಕ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಧಾರವಾಡ, ಮತ್ತು ಆಡಳಿತ ಮಂಡಳಿಯ ನಾಮನಿರ್ದೇಶಿತರು ಸಹಿ ಮಾಡತಕ್ಕದ್ದು.
4. ಕಾಲೇಜಿನ ಹಣಕಾಸಿನ ನಿರ್ವಹಣೆಯನ್ನು ಜಂಟಿ ನಿರ್ದೇಶಕರು ಮತ್ತು ಆಡಳಿತ ಮಂಡಳಿಯು ಜಂಟಿಯಾಗಿ ನಿರ್ವಹಿಸತಕ್ಕದ್ದು.
5. ಕಾಲೇಜಿನಲ್ಲಿ ಸಿಬ್ಬಂದಿಗಳ ನಿವೃತ್ತಿ/ಸ್ವಯಂ ನಿವೃತ್ತಿ/ ನಿಧನದಿಂದ ತೆರವಾಗುವ ಹುದ್ದೆಗಳ ನೇಮಕಾತಿ ಸಂದರ್ಭದಲ್ಲಿ ಜಂಟಿ ನಿರ್ದೇಶಕರ ಅವಗಾಹನೆಗೆ ತಂದು ಸೂಕ್ತ ಅನುಮೋದನೆಯನ್ನು ಸರ್ಕಾರದಿಂದ ಪಡೆಯತಕ್ಕದ್ದು.
6. ಠೇವಣಿಯಿಂದ ಲಭ್ಯವಾಗುವ ಬಡ್ಡಿ ಮೊತ್ತವನ್ನು ಸಿಬ್ಬಂದಿಗಳ ಹುದ್ದೆಯ ಸ್ಥಾನಮಾನಕ್ಕೆ ಅನುಗುಣವಾಗಿ ಹಂಚಿಕೆ ಮಾಡುವುದು ಹಾಗೂ ಬಡ್ಡಿ ಹಣವನ್ನು ವೇತನ ಉದ್ದೇಶಕಾಗಿ ಮಾತ್ರ ಬಳಸಿಕೊಳ್ಳತಕ್ಕದ್ದು. ಇತರೆ ಯಾವುದೇ ಬಾಬ್ತಿಗೆ ಖರ್ಚು ಮಾಡತಕ್ಕದ್ದಲ್ಲ. ಹಾಗೂ ಈ ಬಗ್ಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
7. ಹಣಕಾಸಿನ ಎಲ್ಲಾ ವ್ಯವಹಾರಗಳು ಪಾರದರ್ಶಕವಾಗಿರತಕ್ಕದ್ದು.
8. ಹಿಂದಿನ ಆರ್ಥಿಕ ವರ್ಷ ಮುಕ್ತಾಯಗೊಂಡ ಆರು ತಿಂಗಳ ಒಳಗಾಗಿ ಸದರಿ ಆರ್ಥಿಕ ವರ್ಷಕ್ಕೆ ಸಂಬಂಧಿಸಿದ ಟ್ರಸ್ಟಿನ ಖರ್ಚು ವೆಚ್ಚಗಳ ಕುರಿತಂತೆ ಮಾಹಿತಿಯನ್ನು ಒಳಗೊಂಡ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.
9. ಟ್ರಸ್ಟಿಗಳು ಯಾವುದೇ ರೀತಿಯ ಸಂಭಾವನೆಗೆ ಹಕ್ಕುಳ್ಳರಾಗಿರುವುದಿಲ್ಲ.

10. ಸರ್ಕಾರದಿಂದ ರೂಪಿತವಾದ ಟ್ರಸ್ಟ್ ಅಪರಿವರ್ತನಿಯವಾದದು. (THE TRUST IS IRREVOCABLE)
11. ಟ್ರಸ್ಟಿನ ಕಾರ್ಯ ಚಟುವಟಿಕೆಗಳು ಕರ್ನಾಟಕ ರಾಜ್ಯಕ್ಕೆ ಸೀಮಿತವಾಗಿರತಕ್ಕದ್ದು.
12. ಯಾವುದೇ ಸಂಘ, ಸಂಸ್ಥೆ, ವ್ಯಕ್ತಿಗಳಿಂದ ದೇಣಿಗೆ ಸ್ವೀಕರಿಸಬಾರದು.
13. ಟ್ರಸ್ಟ್, ಮೇಲ್ಕಂಡ ಯಾವುದೇ ಷರತ್ತನ್ನು ಉಲ್ಲಂಘಿಸಿದ್ದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೆ ನಿಯಮಾನುಸಾರ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 856 ವೆಚ್ಚ–8 2015, ದಿನಾಂಕ 21–9–2015ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

**P.R. 217**
**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಸುಬ್ರಮಣ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ, (ವಿಶ್ವವಿದ್ಯಾಲಯಗಳು–2).

## ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ :** ಸಂಸದೀಯ ವ್ಯವಹಾರಗಳ ಇಲಾಖೆಯ ಪರಿಶೀಲನಾ ಸಮಿತಿಯ ಕಾರ್ಯದರ್ಶಿ ಇವರಿಗೆ ಕಛೇರಿ ಕೆಲಸಕ್ಕಾಗಿ ಇಂಟರ್‌ನೆಟ್ ಬಳಕೆಯ ವೆಚ್ಚವನ್ನು ಭರಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 195 ಆಡಳಿತ 2015, ದಿನಾಂಕ: 13.07.2015.
2. ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 198 ಆಡಳಿತ 2015, ದಿನಾಂಕ: 21.07.2015.
3. ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 44 ವೆಚ್ಚ–10/2016, ದಿನಾಂಕ: 20.02.2016.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1) ರಲ್ಲಿ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 2ರ ಉಪ ನಿಯಮ (1) ಖಂಡ (ಜೆ) ಅನ್ವಯ ಶ್ರೀ ಜಿ. ಶ್ರೀಧರ್ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಇವರನ್ನು ಪರಿಶೀಲನಾ ಸಮಿತಿಯ ಕಾರ್ಯದರ್ಶಿಯಾಗಿ ನೇಮಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ರೀತ್ಯಾ ಕೇಂದ್ರ ಸರ್ಕಾರದ ಗೃಹ ಸಚಿವಾಲಯದಲ್ಲಿ ಬಾಕಿಯಿರುವ ಮತ್ತು ರಾಷ್ಟ್ರಾಧ್ಯಕ್ಷರ ಅನುಮೋದನೆಗಾಗಿ ಕಾಯ್ದಿರಿಸಿರುವ ವಿಧೇಯಕಗಳ ಸಮನ್ವಯ ಕಾರ್ಯಕ್ಕೆ ಶ್ರೀ ಜಿ. ಶ್ರೀಧರ್, ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಇವರನ್ನು ಸಮನ್ವಯ ಅಧಿಕಾರಿಯಾಗಿ (ನೋಡಲ್ ಅಧಿಕಾರಿ) ನೇಮಿಸಲಾಗಿದೆ.

ಮೇಲ್ಕಂಡ ಕಾರ್ಯನಿರ್ವಹಣೆಯ ಸಂದರ್ಭಗಳಲ್ಲಿ ಸದರಿಯವರಿಗೆ ನೀಡಲಾದ IPAD ಮತ್ತು Laptap ಗಳ ಕಾರ್ಯನಿರ್ವಹಣೆಯ ಇಂಟರ್‌ನೆಟ್ ಬಳಕೆಗೆ ₹.12,000/– ವಾರ್ಷಿಕ ವೆಚ್ಚಕ್ಕಾಗಿ ಆರ್ಥಿಕ ಇಲಾಖೆಯು ಮೇಲೆ ಓದಲಾದ ಉಲ್ಲೇಖ (3) ರ ಹಿಂಬರಹದಲ್ಲಿ ಸಹಮತಿ ನೀಡಿರುತ್ತದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 28 ಆಡಳಿತ 2016, ಬೆಂಗಳೂರು, ದಿನಾಂಕ: 27.02.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸಂಸದೀಯ ವ್ಯವಹಾರಗಳ ಇಲಾಖೆಯ ಪರಿಶೀಲನಾ ಸಮಿತಿಯ ಮತ್ತು ಕೇಂದ್ರ ಸರ್ಕಾರದ ಗೃಹ ಸಚಿವಾಲಯದಲ್ಲಿ ಬಾಕಿಯಿರುವ ಮತ್ತು ರಾಷ್ಟ್ರಾಧ್ಯಕ್ಷರ ಅನುಮೋದನೆಗಾಗಿ ಕಾಯ್ದಿರಿಸಿರುವ ವಿಧೇಯಕಗಳ ಸಮನ್ವಯ ಕಾರ್ಯಕ್ಕೆ ಶ್ರೀ ಜಿ. ಶ್ರೀಧರ್, ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಇವರಿಗೆ ಸದರಿ ಕಾರ್ಯನಿರ್ವಹಣೆಯ ಸಂದರ್ಭಗಳಲ್ಲಿ IPAD ಅಥವಾ Laptap ಗಳ ಕಾರ್ಯನಿರ್ವಹಣೆಯ ಇಂಟರ್‌ನೆಟ್ ಬಳಕೆಗೆ ₹.12,000/–ವಾರ್ಷಿಕ ವೆಚ್ಚಕ್ಕಾಗಿ ಮಂಜೂರಾತಿ ನೀಡಿ ಆದೇಶಿಸಿದೆ.

4GSIM ನ ಇಂಟರ್ ನೆಟ್ ಬಳಕೆಯಿಂದ ಉಂಟಾಗುವ ವಾರ್ಷಿಕ ₹.12,000/– ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052–00–090–0–051 (ಸಾಮಾನ್ಯ ವೆಚ್ಚಗಳು) (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 44 ವೆಚ್ಚ–10/2016, ದಿನಾಂಕ: 20.02.016ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

**P.R.218**
**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಗುಂಜಿಗಾವಿ,**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳ ಇಲಾಖೆ.

## ವಸತಿ ಸಚಿವಾಲಯ

**ವಿಷಯ :** ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ನಿರ್ದೇಶಕರು / ಸದಸ್ಯರ ಹೆಸರುಗಳಿಗೆ ಷೇರುಗಳ ಬದಲಾವಣೆ ಕುರಿತು.

**ಓದಲಾಗಿದೆ :** 1. ಪತ್ರ ಸಂಖ್ಯೆ: ಎಂಡಿ ಆರ್‌ಜಿಆರ್ ಹೆಚ್‌ಸಿಎಲ್ 08 ಬಿಡಿಎಂ 23 2002, ದಿನಾಂಕ:21.11.2015.

**ಪ್ರಸ್ತಾವನೆ :**

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಒಂದು ಸಾರ್ವಜನಿಕ ನಿಯಮಿತ ಸಮಸ್ಥೆಯಾಗಿದೆ. ತಲಾ 100 ₹.ಗಳ ಒಟ್ಟು 3 ಲಕ್ಷ ಷೇರುಗಳ ಸಂದಾಯಿತ ಬಂಡವಾಳ ಹೊಂದಿರುತ್ತದೆ. ಇದರಲ್ಲಿ, 2,99,993 ಶೇರುಗಳು ಘನವೆತ್ತ ರಾಜ್ಯಪಾಲರು ಹೊಂದಿದ್ದು, ಉಳಿದ 7 ಷೇರುಗಳು ಕರ್ನಾಟಕ ಸರ್ಕಾರದ ವತಿಯಿಂದ 7 ಅಧಿಕಾರಿಗಳ ಹೆಸರಿನಲ್ಲಿರುತ್ತದೆ. ಒಬ್ಬ ಅಧಿಕಾರಿ ವರ್ಗಾವಣೆಗೊಂಡಿರುವುದರಿಂದ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ನಿರ್ದೇಶಕರ ಹೆಸರಿಗೆ ಷೇರುಗಳನ್ನು ಬದಲಾವಣೆ ಮಾಡಿ ಆದೇಶ ಹೊರಡಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ವಇ 412 ಹೆಚ್ಎಎಂ 2015, ಬೆಂಗಳೂರು, ದಿನಾಂಕ: 18-12-2015.

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತದ ಸಂಸ್ಥಾ ನಿವೇದನಾ ಪತ್ರದ ಅನುಚ್ಛೇದ 63ರಿಂದ 69ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಈ ಕೆಳಕಾಣಿಸಿದಂತೆ ₹.100 ರ ಮುಖಬೆಲೆಯ ಷೇರನ್ನು ಈ ಕೆಳಕಂಡ ಅಧಿಕಾರಿಯ ಹೆಸರಿಗೆ ವರ್ಗಾಯಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಷೇರು ಹೊಂದಿರುವ ಅಧಿಕಾರಿಯ ಹೆಸರು | ಷೇರು ವರ್ಗಾಯಿಸಲ್ಪಡಬೇಕಾಗಿರುವ ಅಧಿಕಾರಿಯ ಹೆಸರು |
|---|---|---|
| 1 | ಶ್ರೀ ಚಿಕ್ಕಮುನಿಯಪ್ಪ, ಕೆ.ಎ.ಎಸ್. ಆಯುಕ್ತರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ | ಶ್ರೀ ಬಿಸ್ಸೇಗೌಡ, ಕೆ.ಇ.ಎಸ್. ಆಯುಕ್ತರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ |

**P.R.219**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಮೀರ್ ಮಡಿಮನ್,**
ಸರ್ಕಾರದ ಅಧೀನ ಕಾರ್ಯದರ್ಶಿ-2,
ವಸತಿ ಇಲಾಖೆ.

## FOREST, ECOLOGY AND ENVIRONMENT SECRETARIAT.

**Subject:** Diversion of O.98ha, of forest land in-Chamundi hills SF of Mysuru District for proposed widening of existing road (from City Circle ch 6.31 Kms to Mahishasura Statue Ch.7.71 Kms) in favour of Executive Engineer, PWD, Mysuru-reg,

Read:
1) Principal Chief Conservator of Forests (Head of Forest Force), Bengaluru Letter No. A5(3). GFL.CR.19/2012-13, dt:31-01-2013.
2) Government of Karnataka Letter No.FEE 17 FLL 2013, dt: 20-05-2013.
3) Government of India, M/o Environment and Forests and Climate Change Letter No.F.No. 4-KRB 955/2013/ BAN/6294, dt: 05-12-2014.
4) Principal Chief Conservator of Forests (Head of Forest Force), Bangalore Letter No. A5(3).GFL.CR.25/2013-14, dt: 25-11-2015.
5) Government of Kamataka Letter No.. FEE 17 FLL 2013, dt: 15-12-2015
6) Government of India, M/o Environment and Forests and Climate Change Letter No. F.No.4-KRB 955/2013/ BAN/7978, dt: 09-02- 2016.

**Preamble:**

The Principal Chief Conservator of Forests (Head of Forest Force), Bengaluru vide letter read at (I) had submitted a proposal for diversion of 0.98 ha. of forest land in Chamundi hills SF of Mysuru District for proposed widening of existing road (from City Circle ch 6.31 Kms to Mahishasura Statue Ch.7.71 Kms) in favour of Executive Engineer, PWD, Mysuru subject to certain conditions.

After verification and examination, the proposal was recommended by Govemment of Kamataka and forwarded to Government of India to accord sanction u/s 2 of the Forest (Conservation) Act, 1980 vide letter read at (2).

The Govt. of India, Ministry of Environment and Forests and Climate Change, Regional Office (Southern Zone), Bengaluru vide its letter read at (3) have accorded its in-principle (Stage-I) approval for the proposal subject to fulfillment of certain conditions and the same was communicated to the Principal Chief Conservator of Forests (Head of Forest Force), Bengaluru with a direction to submit compliance report on fulfillment of conditions.

The Principal Chief Conservator of Forests (Head of Forest Force), Bengaluru vide letter under read at (4)' had furnished the compliance report and the same was forwarded to Govt. of India vide letter read at (5) and requested to obtain final approval of Government of India u/s 2 of the Forest (Conservation) Act, 1980.

The Government of India, Ministry of Environment and Forests & Climate Change, Regional Office (Southern Zone) Bengaluru vide its letter under read at (6) have accorded and communicated its final approval (Stage-II) for the proposal u/s 2 of the Forest (Conservation) Act, 1980 subject to certain conditions.

The proposal has been examined in detail and hence the order.

**Government Order No. FEE 17 FLL 2013, Bengaluru, Dated: 24/02/2016.**

In the circumstances as explained in the preamble above, Government is pleased to accord approval u/s 2 of Forest (Conservation) Act, 1980 for diversion of 0.98 ha. of forest land in Chamundi hills SF of Mysuru District for proposed widening of existing road (from City Circle Ch 6.31 Kms to Mahishasura Statue Ch.7.71 Kms) in favour of Executive Engineer, PWD, Mysuru subject to following conditions.

1) The legal status of forest land shall remain unchanged.

2) Demarcation of the proposed forest area shalt be carried out by erecting 4 feet high cement concrete pillars duly numbered at an interval of 20 meters at the cost of user agency.

3) The State Government shall charge the Net Present Value of the diverted forest land measuring 0.98 ha. from User Agency as. per the orders of the Han' ble Supreme Court dated 28.03.2008: and 09.05.2008 in IA Nos.826 in 566 with related IA's in Writ Petition (Civil) No202/1995.

4) Additional amount of the Net Present Value(NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from User Agency. User Agency shall furnish an undertaking to this effect.

5) The total forest area utilized for the project shall not exceed 0.98 ha. Handing and taking over of land and commencement of work in the land shall be done withln a period of two years from the date of Stage-II approval.

6) Any other condition that the Additional Principal Chief Conservator of Forests(Central, Regional Office, Bengaluru may impose from time to time for protection, improvement of flora and fauna in the forest area and public convenience, shall also be applicable.

7) Planting of ten times the number of trees to be felled shall be carried out at the cost of User Agency and location of planting· be intimated to Additional Principal Chief Conservator of Forests(Central); Regional Office, Government of India, Ministry of Environment and Forest, Bengaluru.

8) Handing and taking over of land and commencement of work in the land shall be done within a period of two years from the date of Stage-II approval.

9) The DGPS readings of the forest land diverted shall be communicated to Govt. of India, M/o Environment and Forests, Regional Office (Southern Zone), Kendriya Sadan, 4th Floor, E and F Wings 17th Main Road, 2nd Block, Koramangala, Bengaluru-560034 within 30 days of transfer of the forest land.

10) Violation of any of the conditions shall invite penal action, as deemed fit by the Additional Principal Chief Conservator of Forests (Central), Regional Office, Bengaluru.

11) The lessee shall pay lease rent as fixed by the Government from time to time.

12) The lease tenure is for a period of 20 (twenty) years.

13) The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Dept. u/s 82 of Karnataka Forest Act, 1963. The concerned Chief Conservator of Forests/Deputy Conservator of Forests, is authorized to take necessary action in this regard.

14) No residential building shall be permitted in the proposed forest area.

15) The Kamataka Forest Act, 1963 and Rules, 1969 and other relevant Acts & Rules will be applicable for any violation.

16) The user agency shall not sub-lease, mortgage or hypothecate the forest area.

17) The user agency shall ensure that there should be no damage to the available wildlife and its habitats.

18) Avenue Plantation shall be taken up by user agency along the road on either side (200 plants per km), wherever required at the project cost. The plantation shall be maintained at the project cost for 7 years.

19) The user agency shall pay the cost of raising compensatory afforestation for planting saplings 10 times of the trees to be felled for the project at the rate prevailing at the time of sanction (At present it is ₹.. 906/- per plant).

20) The user agency should take up requisite structures as part of consolidation works on the lower slope of the road in order to prevent soil erosion due to road widening, in consultation with concerned CCF/DCF.

21) The user agency has to.pay the Net Present Value (NPV) of forest land diverted under this proposal as per Orders dated:28-3-2008 and 09-05-2008 of the Hon 'ble Supreme Court of India.

22) No crushing/breaking of stone shall be allowed inside forest area. Readymade material shall be used for up-gradation of such roads.

23) No labour camp shall be established on the forest lands.

24) All measures shall be taken to ensure that no fire occurs in the forest area during the execution of the project.

25) No work shall be allowed after sunset.

26) The user agency shall abide by all the conditions imposed upon by the Government of India, the Government of Kamataka and the Principal Chief Conservator of Forests (Head of Forest Force).

27) The proposal for diversion of forest land for widening of road to a width of *5* mtr. Width an additional 2 mtr. Width to take care of damages to adjacent land etc., may be considered. The length of proposed forest land is 1.4 kmtr.

28) The extent of Road widening limited to 5 x 1400 mtrs. And the work of stabilization with retaining wall over an area of 2 x 1400 mtrs.

29) The cost of retaining wall @ ₹. 35.00 lakh /kms payable by the user agency to stablilised the slops and soil erosion due to dumping of debris.

**P.R. 220**
**SC-100**

By Order and Name in the Government of the Karnataka
**L. SHARADHA**
Under Secretary to Government
Forest, Ecology and Environment Dept.

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ: 10/09/2014 ರಂದು ಬೆಳಗಾವಿ ನಗರದ ಖಡೇಬಜಾರ್‌ನಲ್ಲಿ ನಡೆದ ಆಕಸ್ಮಿಕ ಗಲಭೆಯಲ್ಲಿ ಆಟೋರಿಕ್ಷಾ ವಾಹನಗಳು ಜಖಂಗೊಂಡಿದ್ದು ಹಾನಿಯಾದ ಆಟೋರಿಕ್ಷಾದ ಮಾಲೀಕರಿಗೆ ಪರಿಹಾರ ಧನ ನೀಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ರವರ ಪತ್ರ ಸಂ.ಡಿಸಿ/ಪಿಎಎಲ್/ಸಿಆರ್/658/2014-15, ದಿನಾಂಕ: 03/02/2016.

2) ಸರ್ಕಾರದ ಆದೇಶ ಸಂಖ್ಯೆ : ಹೆಡಿ: 06: ಸಿಆರ್‌ಆರ್: 2014, ದಿ:18/08/2014.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖಿತ (1)ರ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ರವರ ಪತ್ರದಲ್ಲಿ ದಿನಾಂಕ: 10/09/2014 ರಂದು ಬೆಳಗಾವಿ ನಗರದ ಖಡೇಬಜಾರ್‌ನಲ್ಲಿ ನಡೆದ ಆಕಸ್ಮಿಕ ಗಲಭೆಯಿಂದಾಗಿ ಆಟೋರಿಕ್ಷಾ ವಾಹನಗಳು ಜಖಂಗೊಂಡಿದ್ದು, ಸರ್ಕಾರದ ಆದೇಶದನ್ವಯ ಕ್ರಮ ವಹಿಸಿ, ಪರಿಹಾರ ನಿಗಧಿಪಡಿಸಿ ₹.12.500/- (ಹನ್ನೆರಡು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಬೆಳಗಾವಿರವರ ದಿನಾಂಕ: 03/02/2016ರ ಪತ್ರವನ್ನು ಪರಿಶೀಲಿಸಿದ್ದು, ಅದರಂತೆ ಮೇಲೆ ಓದಲಾದ ಉಲ್ಲೇಖಿತ (2) ರ ಸರ್ಕಾರಿ ಆದೇಶದನ್ವಯ ದಿನಾಂಕ: 10/09/2014 ರಂದು ಬೆಳಗಾವಿ ನಗರದ ಖಡೇ ಬಜಾರ್‌ನಲ್ಲಿ ನಡೆದ ಆಕಸ್ಮಿಕ ಗಲಭೆಯಿಂದಾಗಿ 2 ಆಟೋರಿಕ್ಷಾ ವಾಹನಗಳು ಜಖಂಗೊಂಡಿದ್ದು, ಸರ್ಕಾರದ ಆದೇಶದನ್ವಯ ಕ್ರಮ ವಹಿಸಿ ಪರಿಹಾರ ಮೊತ್ತ ₹.12,500/- (ಹನ್ನೆರಡು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳನ್ನು ನಿಗಧಿಗೊಳಿಸಿ, ಮಂಜೂರು ಮಾಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಎಚ್‌ಡಿ 48 ಎಸ್‌ಎಸ್‌ಟಿ 2016, ಬೆಂಗಳೂರು, ದಿನಾಂಕ: 27/02/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಇವರ ದಿನಾಂಕ: 03/02/2016ರ ಪ್ರಸ್ತಾಪವನ್ನು ಪರಿಶೀಲಿಸಿದ್ದು, ಅದರಂತೆ, ಮೇಲೆ ಓದಲಾದ ಉಲ್ಲೇಖಿತ (2)ರ ಸರ್ಕಾರಿ ಆದೇಶದನ್ವಯ ದಿನಾಂಕ: 10/09/2014 ರಂದು ಬೆಳಗಾವಿ ನಗರದ ಖಡೇಬಜಾರ್‌ನಲ್ಲಿ ನಡೆದ ಆಕಸ್ಮಿಕ ಗಲಭೆಯಿಂದಾಗಿ 2 ಆಟೋ ರಿಕ್ಷಾ ವಾಹನಗಳು ಜಖಂಗೊಂಡಿದ್ದು, ಸರ್ಕಾರದ ಆದೇಶದನ್ವಯ ಪರಿಹಾರ ಧನವಾಗಿ ₹. 12,500/- (ಹನ್ನೆರಡು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳನ್ನು ಮಂಜೂರು ಮಾಡಿದೆ.

ಈ ಮೊತ್ತವನ್ನು 2015-16 ನೇ ಸಾಲಿಗೆ ಲೆಕ್ಕ ಶೀರ್ಷಿಕೆ: 2235-60-200-3-01-100 ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ರವರು ವಿತರಿಸಲು ಮಂಜೂರಾತಿ ನೀಡಿದೆ.

ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ. ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ: ಆಇ: 353: ವೆಚ್ಚ: 11: 2014, ದಿನಾಂಕ: 18/07/2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R.221**
**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಪದ್ಮಿನಿದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, ಕಾನೂನು ಮತ್ತು ಸುವ್ಯವಸ್ಥೆ.

## ಕಂದಾಯ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ಗಾಯರಾಣ ರಿಸ: ನಂ. 119 ರಲ್ಲಿ ಕ್ಷೇತ್ರ 8.00 ಎಕರೆ ಜಮೀನನ್ನು ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂ: ಪ್ರಾಅಬೆ:ಭೂಮಿ:4:ಎಲ್.ಜಿ.ಎಲ್: 44/2013-14, ದಿನಾಂಕ 17-01-2015.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಮೇಲೆ ಓದಲಾದ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ಉತ್ತರ ಕನ್ನಡ ಜಿಲ್ಲೆ ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ಗಾಯರಾಣ ರಿಸ: ನಂ.119 ರಲ್ಲಿ ಕ್ಷೇತ್ರ 8.00 ಎಕರೆ ಜಮೀನನ್ನು ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ವರದಿಯಲ್ಲಿ ಅಂಕೋಲಾ ತಾ॥ ಬಳಸೆ ಗ್ರಾಮದ ರಿಸ.ಸಂ. 119ರ ಒಟ್ಟು ಕ್ಷೇತ್ರ 11-22 ಗುಂಟೆ ಇದ್ದು ಸರ್ಕಾರಿ ಗಾಯರಾಣ (ಗೋಚಾರವ) ಅಂತಾ ಪಹಣಿ ಪತ್ರಿಕೆ ಕಲಂ.9 ರಲ್ಲಿ ಇರುವುದಾಗಿ, ಅದರಲ್ಲಿ ಒಟ್ಟು 8.00 ಎಕರೆ ಜಮೀನನ್ನು

ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸುವ ಜಮೀನು ಬಂಡೆ ಕಲ್ಲುಗಳಿಂದ ಕೂಡಿದ ಜಮೀನು ಇರುವುದರಿಂದ ಹುಲ್ಲು ಬೆಳೆಸಲು ಸಾಧ್ಯವಿರುವುದಿಲ್ಲ. ಗ್ರಾಮದಲ್ಲಿ ಸಾಕಷ್ಟು ಅರಣ್ಯ ಜಮೀನು ಇರುವುದರಿಂದ ಜಾನುವಾರುಗಳಿಗೆ ಮೇವಿನ ತೊಂದರೆ ಉಂಟಾಗುವುದಿಲ್ಲ, ಹಾಗೂ ಜಮೀನು ಅತಿಕ್ರಮಣದಿಂದ ಮುಕ್ತವಿದ್ದು ರಸ್ತೆ ಸಂಪರ್ಕ ಹೊಂದಿರುವುದಾಗಿ ಮತ್ತು ಭೂ ಸ್ವಾಧೀನ ಪ್ರಕ್ರಿಯೆಗೆ ಒಳಪಡುವುದಿಲ್ಲ ಹಾಗೂ ಯಾವುದೇ ನ್ಯಾಯಾಲಯದಲ್ಲಿ ವ್ಯಾಜ್ಯ ನಡೆದಿರುವುದಿಲ್ಲ ಹಾಗೂ ಬೆಲೆ ಬಾಳುವ ಗಿಡಮರಗಳು ಇರುವುದಿಲ್ಲ. ಅದರಿಂದ ಸಾರ್ವಜನಿಕ ಉಪಯೋಗಕ್ಕೆ ಮೀಸಲಿಡಲು ಗ್ರಾಮ ಪಂಚಾಯತ್ ಬೆಳಸೆ ಇವರು ಸಹ ಸಮಾಜ ಕಲ್ಯಾಣ ಇಲಾಖೆಗೆ ಮಂಜೂರು ಮಾಡಲು ಸರ್ವಾನುಮತದಿಂದ ನಿರ್ಣಯಿಸಿರುತ್ತಾರೆ ಎಂದು ಪ್ರಾದೇಶಿಕ ಆಯುಕ್ತರು ವರದಿ ಮಾಡಿರುತ್ತಾರೆ.

ಪರಿಶೀಲಿಸಲಾಗಿ, ಗ್ರಾಮದಲ್ಲಿ ಸಾಕಷ್ಟು ಅರಣ್ಯಭೂಮಿ ಗೋವುಗಳ ಮೇವಿಗೆ ಲಭ್ಯವಿರುವುದರಿಂದ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ಗಾಯರಾಣ ರಿ.ಸ. ನಂ. 119 ರಲ್ಲಿ ಕ್ಷೇತ್ರ 8.00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಾವಳಿ, 1966 ರ ನಿಯಮ 97 (4) ರನ್ವಯ ಗೋಮಾಳ ಶೀರ್ಷಿಕೆಯಿಂದ ಕಡಿಮೆ ಮಾಡಿ, ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 71 ರನ್ವಯ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಬಹುದಾಗಿದೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲೀಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 10 ಎಲ್‌ಜಿಎನ್ 2015, ದಿನಾಂಕ: 20/02/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನ ಬೆಳಸೆ ಗ್ರಾಮದ ಗಾಯರಾಣ ರಿಸ.ನಂ.119 ರಲ್ಲಿ ಕ್ಷೇತ್ರ 8.00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಾವಳಿ, 1966ರ ನಿಯಮ, 97 (4) ರನ್ವಯ ಗೋಮಾಳ, ಶೀರ್ಷಿಕೆಯಿಂದ ಕಡಿಮೆ ಮಾಡಿ; ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 71 ರನ್ವಯ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ನಿರ್ಮಾಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಲಾಗಿದೆ.

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಮಂಜೂರಿಸಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಸದರಿ ಜಮೀನನ್ನು ಮಂಜೂರಿಸಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
3. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
4. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

**P.R.222**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್ ನಾಯಕ್,**
ಪೀಠಾಧಿಕಾರಿ,
ಕಂದಾಯ ಇಲಾಖೆ, (ಭೂ.ಮಂ–2).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ, ಕೆ.ಜಿ.ಎಫ್. ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1)ಕ್ಕೆ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1) ಆಯುಕ್ತರು, ಕೆ.ಜಿ.ಎಫ್ ನಗರಾಭಿವೃದ್ಧಿ ಪ್ರಾಧಿಕಾರ, ಕೆ.ಜಿ.ಎಫ್, ಇವರ ಪತ್ರಸಂಖ್ಯೆ: ಕೆ.ಜಿ.ಎಫ್./ ನಅಪ್ರಾ/ಮಯೋ (ಪರಿಷ್ಕೃತ–1) –2031/04/2014–15/126, ದಿ: 02.09.2014 ಮತ್ತು 08.07.2015.

2) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ: ನಗ್ರಾಯೋ (22) ಬೆಂವಿ/ಕೆ.ಜಿ.ಎಫ್/ಮ.ಯೋ (ಪ–1)2014–15, ದಿ: 12.02.2015.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಪತ್ರದಲ್ಲಿ ಆಯುಕ್ತರು, ಕೆ.ಜಿ.ಎಫ್. ನಗರಾಭಿವೃದ್ಧಿ ಪ್ರಾಧಿಕಾರ, ಕೆ.ಜಿ.ಎಫ್. ಇವರು ಕೆ.ಜಿ.ಎಫ್. ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) 2031 ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ ಶಿಫಾರಸ್ಸಿನೊಂದಿಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ರ ಕಡತದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ, ಮುಂದಿನ ಯೋಜನಾ ಅವಧಿಗೆ ಅಂದರೆ 2031 ರ ವೇಳೆಗೆ ಪಟ್ಟಣದ ಜನಸಂಖ್ಯೆ 3,70.000 ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–1) ತಯಾರಿಸಲಾಗಿದೆ. ಕೆ.ಜಿ.ಎಫ್ ಪಟ್ಟಣದ ಸ್ಥಳಿಯ ಯೋಜನಾ ಪ್ರದೇಶದ 216 ಚ.ಕಿ.ಮೀ. ವಿಸ್ತೀರ್ಣದಲ್ಲಿ 4994.48 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆ (ಪರಿಷ್ಕೃತ–1) ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ ಕೆ.ಜಿ.ಎಫ್. ಪಟ್ಟಣದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಪ್ರದೇಶದಲ್ಲಿ ವಸತಿಗಾಗಿ 2521.88 ಹೆಕ್ಟೇರ್ (ಶೇ.54.62), ವಾಣಿಜ್ಯಕ್ಕಾಗಿ 253.33 ಹೆಕ್ಟೇರ್ (ಶೇ. 5.49), ಕೈಗಾರಿಕಾಗಿ 453.89 ಹೆಕ್ಟೇರ್ (ಶೇ.9.83), ಸಾರ್ವಜನಿಕ/ಅರೆ ಸಾರ್ವಜನಿಕಕ್ಕೆ 226.31 ಹೆಕ್ಟೇರ್ (ಶೇ 4.91), ಉದ್ಯಾನವನ ಮತ್ತು ಬಯಲು ಜಾಗಗಳಿಗೆ 513.51 ಹೆಕ್ಟೇರ್ (ಶೇ.11.12), ಸಾರ್ವಜನಿಕ ಉಪಯುಕ್ತತೆಗಾಗಿ 38.19 ಹೆಕ್ಟೇರ್ (ಶೇ0.83) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 610.06 ಹೆಕ್ಟೇರ್ (ಶೇ. 13.20) ಪ್ರದೇಶವನ್ನು ಕಾಯ್ದಿರಿಸಿದ್ದು, ಸದರಿ ನಗರೀಕರಣ ಪ್ರದೇಶದಲ್ಲಿ 377.31 ಹೆಕ್ಟೇರ್ ಪ್ರದೇಶವು ನೀರಿನಿಂದ ಆವೃತವಾಗಿದೆ, ಸದರಿ ಪ್ರದೇಶವನ್ನು ಭೂ ವಿಶ್ಲೇಷಣೆಯಲ್ಲಿ ಪರಿಗಣಿಸಿರುವುದಿಲ್ಲ. ಮಹಾ ಯೋಜನೆ (ಪರಿಷ್ಕೃತ–1) 2031ನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ನಅಇ 217 ಬೆಂರೂಪ್ರಾ 2015, ಬೆಂಗಳೂರು, ದಿನಾಂಕ: 07/01/2016.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆ.ಜಿ.ಎಫ್ ನಗರಾಭಿವೃದ್ಧಿ ಪ್ರಾಧಿಕಾರ, ಕೆ.ಜಿ.ಎಫ್. ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) 2031 ಕ್ಕೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೊಜನಾ ಕಾಯ್ದೆ, 1961ರ ಕಾಯ್ದೆ 13(1) ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

"ವಲಯ ನಿಯಮಾವಳಿಯ" off-street parking spaces' ನಲ್ಲಿ Single family residential ಗೆ ಪ್ರತಿ 100 ಚ.ಮೀ. floor Area ಗೆ ಪಾರ್ಕಿಂಗ್ ಸ್ಪೇಸ್ ಒದಗಿಸತಕ್ಕದ್ದು."

ಮಹಾ ಯೋಜನೆ (ಪರಿಷ್ಕೃತ–1) ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**P.R.223**

**SC-150**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ರಾಜೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಟಿ. ಪ್ರತಾಪ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಸಾಗರಕಟ್ಟೆ, ಮೈಸೂರು ಜಿಲ್ಲೆ ಇವರನ್ನು ಅನಧಿಕೃತ ಗೈರುಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ–ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಡಿಪಿಜಿ/ಮೈವಿ/ಮೈ/73/2009–10, ದಿನಾಂಕ: 09/05/2011.
2) ಡಾ॥ ಟಿ. ಪ್ರತಾಪ್, ವೈದ್ಯಾಧಿಕಾರಿಗಳು ಇವರ ರಕ್ಷಣಾ ಹೇಳಿಕೆ ದಿನಾಂಕ: 01/12/2011.
3) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಪಿಜಿ/ಮೈವಿ/ಮೈ/73/2009–10, ದಿನಾಂಕ: 08/11/2011.
4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 04/01/2012.
5) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಎರಡನೇ ತಿಳುವಳಿಕೆ ಪತ್ರ ದಿನಾಂಕ: 13/04/2012.
6) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಡಿಜಿ/ಮೈ ವಿ/ಮೈ/73/2009–10, ದಿನಾಂಕ: 03/01/2013.

**ಪ್ರಸ್ತಾವನೆ :**

ಡಾ॥ ಟಿ. ಪ್ರತಾಪ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಸಾಗರಕಟ್ಟೆ, ಮೈಸೂರು ಜಿಲ್ಲೆ ಇವರು ದಿ: 19/5/2005 ರಿಂದ ಇಲಾಖೆಯಿಂದ ಅನುಮತಿ ಪಡೆಯದೆ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿ ನಂತರ 03 ವರ್ಷಗಳ ಅಸಾಧಾರಣಾ ರಜೆ ಅರ್ಜಿಯನ್ನು ಸಲ್ಲಿಸಿ, ಈ ರಜೆ ಮಂಜೂರಾಗಿರುವುದಿಲ್ಲವೆಂದು ಹಾಗೂ 2008 ಮೇ ತಿಂಗಳಿನಲ್ಲಿ ಸ್ನಾತಕೋತ್ತರ ವ್ಯಾಸಂಗ ಮುಗಿದಿದ್ದರೂ ಕೌಟುಂಬಿಕ ಕಾರಣಗಳಿಂದ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗದ ಕಾರಣ ತಿಳಿಸಿ ದಿ: 25/2/2010ರಲ್ಲಿ ಆಯುಕ್ತರಿಗೆ ಮನವಿಯನ್ನು ಸಲ್ಲಿಸಿ ಪುನಃ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡುವಂತೆ ಕೋರಿದ್ದರ ಮೇರೆಗೆ ಇವರ ಮನವಿಯನ್ನು ಅಂಗೀಕರಿಸಿ ಆಯುಕ್ತರು ತಮ್ಮ ಅ.ಜ್ಞಾ ಸಂಖ್ಯೆ:ಡಿಪಿಜಿ/ಮೈವಿ/ಮೈ/27/2009–10 ದಿ: 22/4/2010ರ ಆದೇಶದಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ ಸಾರ್ವಜನಿಕ ಆಸ್ಪತ್ರೆ, ನಂಜನಗೂಡು ಇಲ್ಲಿ ಖಾಲಿಯಿರುವ ಹೆರಿಗೆ ಮತ್ತು ಸ್ತ್ರೀರೋಗ ತಜ್ಞರ ಹುದ್ದೆಗೆ ನೇಮಕ ಮಾಡಿದ್ದರೂ ಇದುವರೆವಿಗೂ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಈ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ಜರುಗಿಸಲು ನಿರ್ಧರಿಸಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ರ ನಿಯಮ 11 ರಡಿಯಲ್ಲಿ ಮೇಲೆ ಓದಲಾದ ಕ್ರಸಂ (1) ರ ದಿನಾಂಕ: 9/5/2011ರ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ, ದೋಷಾರೋಪಣಾ ಪಟ್ಟಿಯಲ್ಲಿನ ಆರೋಪಗಳ ಬಗ್ಗೆ ತಮ್ಮ ಸಮಜಾಯಿಷಿಯನ್ನು ಸಲ್ಲಿಸುವಂತೆ ಸದರಿ ವೈದ್ಯಾಧಿಕಾರಿಯವರಿಗೆ ಸೂಚಿಸಿರುತ್ತಾರೆ.

ಆಯುಕ್ತಾಲಯದಿಂದ ಜಾರಿ ಮಾಡಲಾದ ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರಕ್ಕೆ ಸದರಿ ವೈದ್ಯಾಧಿಕಾರಿಗಳು ತಮ್ಮ ವಿವರಣಾ ಪತ್ರದೊಂದಿಗೆ ರಾಜೀನಾಮೆ ಪತ್ರವನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳು ಸತ್ಯವಾಗಿದ್ದು, ವೈಯಕ್ತಿಕ ಕಾರಣಗಳಿಂದ ತಾವು ಸೇವೆಯಲ್ಲಿ ಮುಂದುವರೆಯಲು ಸಾಧ್ಯವಾಗದ ಕಾರಣ ತಮ್ಮ ರಾಜೀನಾಮೆಯನ್ನು ಅಂಗೀಕರಿಸಬೇಕೆಂದು ಮೇಲೆ ಓದಲಾದ ಕ್ರಸಂ. (2)ರ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ, ಬೆಂಗಳೂರು ಇವರು ಸದರಿ ವೈದ್ಯಾಧಿಕಾರಿಯವರ ಸಮಜಾಯಿಷಿಯನ್ನು ಒಪ್ಪದೆ ಇಲಾಖಾ ವಿಚಾರಣೆ ಜರುಗಿಸಲು ತೀರ್ಮಾನಿಸಿ ಮೇಲೆ ಕ್ರಸಂ (3) ರಲ್ಲಿ ಒದಲಾದ ದಿನಾಂಕ: 8/11/2011ರ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಡಳಿತಾಧಿಕಾರಿ (ಸಾಮಾನ್ಯ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ನಿರ್ದೇಶನಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ನಿರ್ದೇಶಾನುಸಾರ ಪ್ರಕರಣದ ವಿಚಾರಣೆ ಜರುಗಿಸಿದ ವಿಚಾರಣಾಧಿಕಾರಿಗಳು ದಿನಾಂಕ: 03/01/2012 ರಂದು ಸದರಿ ವೈದ್ಯಾಧಿಕಾರಿಯವರನ್ನು ವಿಚಾರಣೆ ನಡೆಸಲಾಗಿ ಸದರಿ ದಿನದಂದು ವೈದ್ಯಾಧಿಕಾರಿಯವರು ವಿಚಾರಣೆಗೆ ಖುದ್ದು ಹಾಜರಾಗಿ ತಮ್ಮ ಮೇಲಿನ ಆಪಾದನೆಯನ್ನು ಒಪ್ಪಿಕೊಂಡಿರುತ್ತಾರೆ. ಆದ ಕಾರಣ ವಿಚಾರಣೆ ಸಂದರ್ಭದಲ್ಲಿ ಸ್ವತಃ ಆಪಾದಿತರೆ ತಮ್ಮ ಮೇಲಿನ ಆಪಾದನೆಯನ್ನು ಒಪ್ಪಿಕೊಂಡು ಮೌಖಿಕ ಹೇಳಿಕೆ ನೀಡಿರುವುದರಿಂದ ಇವರ ಮೇಲಿನ ಆಪಾದನೆ ನಿಸ್ಸಂಶಯವಾಗಿ ಸಾಬೀತಾಗಿಯೆಂದು ಮೇಲೆ ಕ್ರಸಂ (4) ರಲ್ಲಿ ಓದಲಾದ ದಿನಾಂಕ: 4/1/2012ರ ವರದಿಯಲ್ಲಿ ಅಭಿಪ್ರಾಯ ನೀಡಿರುತ್ತಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಿರುವ ದಿನಾಂಕ: 04/01/2012ರ ವಿಚಾರಣಾ ವರದಿಯನ್ನು ಸದರಿ ವೈದ್ಯರಿಗೆ ಮೇಲೆ ಕ್ರಸಂ (5) ರಲ್ಲಿ ಓದಲಾದ ದಿನಾಂಕ : 13/4/2012ರ ಎರಡನೇ ತಿಳುವಳಿಕೆ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಜಾರಿಗೊಳಿಸಿರುತ್ತಾರೆ.

ಸದರಿ ವೈದ್ಯಾಧಿಕಾರಿಯವರಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರಕ್ಕೆ ಆಪಾದಿತ ವೈದ್ಯರು ಯಾವುದೇ ಹೇಳಿಕೆಯನ್ನು ಇದುವರೆವಿಗೂ ಸಲ್ಲಿಸಿರುವುದಿಲ್ಲವೆಂದು ಹಾಗೂ ಇವರ ಅನಧಿಕೃತ ಗೈರುಹಾಜರಿ ಆರೋಪವು ಸಾಬೀತಾಗಿರುವುದರಿಂದ ಮತ್ತು ವೈದ್ಯಾಧಿಕಾರಿಯವರು ಇಂದಿನವರೆವಿಗೂ ಕರ್ತವ್ಯಕ್ಕೆ ಹಾಜರಾಗದಿರುವುದರಿಂದ ಸದರಿಯವರಿಗೆ ಕಠಿಣ ದಂಡನೆ ವಿಧಿಸುವಂತೆ ಮೇಲೆ ಕ್ರ.ಸಂ. (6) ರಲ್ಲಿ ಓದಲಾದ ದಿನಾಂಕ: 03/1/2013 ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ವಿಚಾರಣಾ ವರದಿ ಹಾಗೂ ಲಭ್ಯವಿರುವ ಎಲ್ಲಾ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಡಾ। ಟಿ. ಪ್ರತಾಪ್ ಇವರ ವಿರುದ್ಧದ ಅನಧಿಕೃತ ಗೈರುಹಾಜರಿ ಆರೋಪವನ್ನು ಸದರಿ ವೈದ್ಯರು ಒಪ್ಪಿಕೊಂಡಿರುವುದರಿಂದ ಹಾಗೂ ಈ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ಆಯುಕ್ತರು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಸದರಿ ವೈದ್ಯರಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (VIII) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 111 ಎಂಎಸ್ಎ 2013 ಬೆಂಗಳೂರು, ದಿನಾಂಕ: 18/02/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಡಾ॥ ಟಿ. ಪ್ರತಾಪ್, ವೈದ್ಯಾದಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಸಾಗರಕಟ್ಟೆ, ಮೈಸೂರು ಜಿಲ್ಲೆ ಇವರ ವಿರುದ್ಧ ಅನಧಿಕೃತ ಗೈರುಹಾಜರಿ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (VIII) ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

**P.R.224**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ಶ್ರೀನಿವಾಸಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕೋಳಾಲ ಹೋಬಳಿ, ಸಿದ್ದಾಪುರ ಗ್ರಾಮದ ಸ.ನಂ.2 ರಲ್ಲಿ1–00 ಎಕರೆ ಹಾಗೂ ಸ.ನಂ. 35 ರಲ್ಲಿ 4–00 ಎಕರೆ ಗೋಮಾಳ ಜಮೀನನ್ನು ಒಟ್ಟು ಕ್ಷೇತ್ರ 5–00 ಎಕರೆ ಸರ್ಕಾರಿ ಜಮೀನನ್ನು ಶ್ರೀ ಚಾಮುಂಡೇಶ್ವರಿ, ಶ್ರೀ ಈಶ್ವರ ಹಾಗೂ ಶ್ರೀ ಪರ್ವತಾಂಜನೇಯ ದೇವಾಲಯದ ಸೇವಾ ಟ್ರಸ್ಟ್ (ರಿ), ಸಿದ್ದಾಪುರ, ಕೊರಟಗೆರೆ ತಾಲ್ಲೂಕು ಇವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್ಎನ್‌ಡಿ/ಸಿಆರ್/07/2014–15, ದಿನಾಂಕ:20–05–2014.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ದಿ: 20–05–2014ರ ಪ್ರಸ್ತಾವನೆಯಲ್ಲಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರು ವರದಿ ಮಾಡಿರುವಂತೆ, ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕೋಳಾಲ ಹೋಬಳಿ, ಸಿದ್ದಾಪುರ ಗ್ರಾಮದಲ್ಲಿ 87–13 ಎಕರೆ ಗೋಮಾಳ ಜಮೀನಿದ್ದು ಪ್ರಸ್ತುತ ಗ್ರಾಮದಲ್ಲಿರುವ ಜಾನುವಾರುಗಳ ಸಂಖ್ಯೆಗನುಗುಣವಾಗಿ ಸಾಕಷ್ಟು ಗೋಮಾಳ ಜಮೀನು ಲಭ್ಯವಿರುತ್ತದೆಂದು ಹಾಗೂ ಸದರಿ ಜಮೀನಿನ ನಮೂನೆ 50 ಮತ್ತು 53ರ ಅರ್ಜಿಗಳಿಂದ ಮುಕ್ತವಾಗಿರುತ್ತದೆಂದು ತಿಳಿಸಿರುತ್ತಾರೆ. ಸಿದ್ದಾಪುರ ಗ್ರಾಮದ ಸ.ನಂ. 2ರಲ್ಲಿ 1–00ಎಕರೆ ಹಾಗೂ ಸ.ನಂ. 35 ರಲ್ಲಿ 13–14ಎಕರೆ ಗೋಮಾಳ ಜಮೀನಿನ ಪೈಕಿ 11–00 ಎಕರೆ ಒಟ್ಟು ಕ್ಷೇತ್ರ 12–00 ಎಕರೆ ಸರ್ಕಾರಿ ಜಮೀನನ್ನು ಶ್ರೀ ಚಾಮುಂಡೇಶ್ವರಿ, ಶ್ರೀ ಈಶ್ವರ ಹಾಗೂ ಶ್ರೀ ಪರ್ವತಾಂಜನೇಯ ದೇವಾಲಯದ ಸೇವಾ ಟ್ರಸ್ಟ್ (ರಿ), ಸಿದ್ದಾಪುರ, ಕೊರಟಗೆರೆ ತಾಲ್ಲೂಕು ಇವರಿಗೆ ಧಾರ್ಮಿಕ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಗೆ ಭೂ ಮಂಜೂರಾತಿ ಮಾಡುವುದಕ್ಕೆ ಸಂಬಂಧಿಸಿದಂತೆ ದಿನಾಂಕ: 17.06.2013 ರಂದು ನೀಲಗೊಂಡನಹಳ್ಳಿ ಮತ್ತು ಎಲೇರಾಂಪುರ ಗ್ರಾಮಸ್ಥರು ಉಪವಿಭಾಗಾಧಿಕಾರಿ, ಮಧುಗಿರಿ ಇವರಿಗೆ ಆಕ್ಷೇಪಣಾ ಮನವಿಯನ್ನು ಸಲ್ಲಿಸಿದ್ದು, ತತ್ಸಂಬಂಧ ಟ್ರಸ್ಟ್ ಅಧ್ಯಕ್ಷರು ಆಕ್ಷೇಪಣೆ ಹೇಳಿಕೆಗೆ ಸಮಜಾಯಿಷಿ ನೀಡಿರುತ್ತಾರೆ. ಅದರಂತೆ ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರು ಸ್ಥಳ ತನಿಖೆ ಮಾಡಿ ಪ್ರಸ್ತಾಪಿತ ಜಮೀನು ಕಲ್ಲುಬಂಡೆಗಳಿಂದ ಕೂಡಿದ್ದು, ಜಾನುವಾರುಗಳಿಗೆ ಮೇವು ಬೆಳೆಯಲು ಯೋಗ್ಯವಾದ ಪ್ರದೇಶವಾಗಿಲ್ಲವೆಂದು ಹಾಗೂ ಇಲ್ಲಿ ಯಾವುದೇ ಅನಧಿಕೃತ ಕಟ್ಟಡಗಳಾಗಲಿ, ಬೆಲೆಬಾಳುವ ಮರಗಳಾಗಲಿ ಇರುವುದಿಲ್ಲವೆಂದು ಮತ್ತು ಸದರಿ ಜಮೀನು ಕೊರಟಗೆರೆಯಿಂದ ದಾಬಸ್‌ಪೇಟೆಗೆ ಹೋಗುವ ರಾಜ್ಯ ಹೆದ್ದಾರಿಯ ಪಕ್ಕದಲ್ಲಿ ಇರುವುದಾಗಿ ವರದಿಯಲ್ಲಿ ತಿಳಿಸಿರುತ್ತಾರೆ.

ಶ್ರೀ ಚಾಮುಂಡೇಶ್ವರಿ, ಶ್ರೀ ಈಶ್ವರ ಹಾಗೂ ಶ್ರೀ ಪರ್ವತಾಂಜನೇಯ ದೇವಾಲಯದ ಸೇವಾ ಟ್ರಸ್ಟ್ (ರಿ) ಈ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರು, ದಿನಾಂಕ: 30–03–2013 ಹಾಗೂ ತದನಂತರ ಸರ್ಕಾರಕ್ಕೆ ಸಲ್ಲಿಸಿರುವ ಮನವಿಗಳಲ್ಲಿ ಪ್ರಸ್ತಾಪಿತ ಜಮೀನಿನಲ್ಲಿ ಸಿಮೆಂಟಿನಿಂದ ಮಾಡಲ್ಪಟ್ಟ 242 ಅಡಿ ಎತ್ತರದ ಶಿವನ ವಿಗ್ರಹವನ್ನು ಹಾಗೂ ಈ ವಿಗ್ರಹದ ಸುತ್ತ ಕೋಟಿನಾಗ ಪ್ರತಿಷ್ಠೆಯನ್ನು ಮಾಡಲು ಉದ್ದೇಶಿಲಾಗಿದೆಯೆಂದು ತಿಳಿಸಿದ್ದಾರೆ. ಹಾಗೂ ಈ ಕ್ಷೇತ್ರದಲ್ಲಿ ಈಗಾಗಲೇ 40 ಅಡಿ ಉದ್ದ ಮತ್ತು 16 ಅಡಿ ಅಗಲದ ಏಕಶಿಲಾ ಶ್ರೀ ಪರ್ವತಾಂಜನೇಯ ಸ್ವಾಮಿ ದೇವರ ವಿಗ್ರಹವನ್ನು ಹಾಗೂ 30 ಅಡಿ ಉದ್ದ ಮತ್ತು 18 ಅಡಿ ಅಗಲದ ಏಕಶಿಲಾ ಶಿವನ ವಿಗ್ರಹವನ್ನು ನಿಲ್ಲಿಸಲಾಗಿದೆಯೆಂದು ತಿಳಿಸಿರುತ್ತಾರೆ.

ಸದರಿ ಜಮೀನಿನಲ್ಲಿ ಧರ್ಮಛತ್ರಗಳು, ಧ್ಯಾನ ಮಂದಿರ, ಉಚಿತ ಸಾರ್ವಜನಿಕ ಆಸ್ಪತ್ರೆ, ಅನಾಥಾಶ್ರಮ, ವೃದ್ಧಾಶ್ರಮ, ಶಿಕ್ಷಣ ಸಂಸ್ಥೆಗಳು, ದಾಸೋಹ ಕಟ್ಟಡಗಳನ್ನು ನಿರ್ಮಿಸಿ, ಸದರಿ ಸ್ಥಳವನ್ನು ಒಂದು ಧಾರ್ಮಿಕ ಕ್ಷೇತ್ರವನ್ನಾಗಿ ಮಾಡಿ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಚಟುವಟಿಕೆಗಳಿಗಾಗಿ ಸದ್ಭಳಕೆ ಮಾಡಿಕೊಳ್ಳುವುದಾಗಿ ತಿಳಿಸಿರುತ್ತಾರೆ. ಮುಂದುವರಿದು ಟ್ರಸ್ಟಿನ ವತಿಯಿಂದ ಬಡಮಕ್ಕಳ ವಿದ್ಯಾಭ್ಯಾಸಕ್ಕಾಗಿ ಪುಸ್ತಕಗಳನ್ನು ವಿತರಿಸಲು ಹಾಗೂ ಗ್ರಾಮೀಣ ಭಾಗದ ಜನರಿಗೆ ಸಹಾಯಹಸ್ತ ನೀಡುವಂತಹ ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದಾಗಿ ಸದರಿ ಉದ್ದೇಶಗಳಿಗಾಗಿ ಬೇಕಾಗಿರುವ 12–00 ಎಕರೆ ಸರ್ಕಾರಿ ಜಮೀನನ್ನು ತಮ್ಮ ಟ್ರಸ್ಟ್‌ಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 55 ಎಲ್‌ಜಿಟಿ 2014, ಬೆಂಗಳೂರು, ದಿನಾಂಕ: 26/02/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು, ಕೋಳಾಲ ಹೋಬಳಿ, ಸಿದ್ದಾಪುರ ಗ್ರಾಮದ ಸ.ನಂ. 2 ರಲ್ಲಿ 1–00 ಎಕರೆ ಜಮೀನನ್ನು ಹಾಗೂ ಸ.ನಂ. 35 ರಲ್ಲಿನ 13–14 ಎಕರೆ ಸರ್ಕಾರಿ ಗೋಮಾಳ ಜಮೀನಿನ ಪೈಕಿ 4–00 ಎಕರೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4) ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಒಟ್ಟು 5–00 ಎಕರೆ ಜಮೀನನ್ನು ಶ್ರೀ ಚಾಮುಂಡೇಶ್ವರಿ, ಶ್ರೀ ಈಶ್ವರ ಹಾಗೂ ಶ್ರೀ ಪರ್ವತಾಂಜನೇಯ ದೇವಾಲಯದ ಸೇವಾ ಟ್ರಸ್ಟ್ ರಿ, ಸಿದ್ದಾಪುರಗ್ರಾಮ, ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ ಇವರಿಗೆ ಧಾರ್ಮಿಕ ಉದೇಶಗಳಿಗಾಗಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22–ಎ ಅನ್ವಯ ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇ. 50 ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಿ ಆದೇಶಿಸಿದೆ.

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.
2. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರು ಮಾಡಲ್ಪಡುವ ಜಮೀನನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯ ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು ಹಾಗೂ ಈ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
5. ಮಂಜೂರಾದ ಜಮೀನನಲ್ಲಿ, ಅಭಿವೃದ್ಧಿ ಕಾರ್ಯಗಳನ್ನು ಆರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
6. ಮಂಜೂರಾದ ಜಮೀನು, 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೆ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

**P.R.225**

**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರೇವಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
(ಕಂದಾಯ ಇಲಾಖೆ. ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಅಮರಾವತಿ ಗ್ರಾಮದ ಸ.ನಂ. 571 ರಲ್ಲಿ 9–20 ಹೆಕ್ಟೇರ್ ಜಮೀನನ್ನು ಪವನ ವಿದ್ಯುತ್ ಪ್ರಾಜೆಕ್ಟ್‌ಗಾಗಿ ಮೆ: ಎಂ.ಎಸ್.ಪಿ.ಎಲ್ ಗ್ಯಾಸಸ್ ಲಿಮಿಟೆಡ್, ಹೊಸಪೇಟೆ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರ ಪತ್ರ ಸಂಖ್ಯೆ: ಪ್ರಾಆಗು/ಭೂಮಿ–1/41/2011–12, ದಿನಾಂಕ: 27.05.2011.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರು ದಿನಾಂಕ: 27.05.2011ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರು ಹೊಸಪೇಟೆ ತಾಲ್ಲೂಕು, ಅಮರಾವತಿ ಗ್ರಾಮದ ಸ,ನಂ. 571 ರಲ್ಲಿ 9–20 ಹೆಕ್ಟೇರ್ ಜಮೀನನ್ನು ಪವನ ವಿದ್ಯುತ್ ಪ್ರಾಜೆಕ್ಟ್‌ಗಾಗಿ 10 ವರ್ಷಗಳ ಅವಧಿಗೆ ಮೆ॥ ಎಂ.ಎಸ್.ಪಿ.ಎಲ್ ಗ್ಯಾಸಸ್ ಹೊಸಪೇಟೆ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಮುಂದುವರೆದು, ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರು ತಮ್ಮ ದಿ: 16.05.2011ರ ಪತ್ರದಲ್ಲಿ ಮೆ॥ಎಂ.ಎಸ್.ಪಿ.ಎಲ್. ಗ್ಯಾಸಸ್ ಹೊಸಪೇಟೆ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಪ್ರಸ್ತಾಪಿಸಿರುವ ಅಮರಾವತಿ ಗ್ರಾಮದ ಸ.ನಂ. 571 ರಲ್ಲಿ 331.64 ಎಕರೆ ಇದ್ದು, ಪಹಣಿಯ ಕಾಲಂ 9 ರಲ್ಲಿ ಸರ್ಕಾರಿ ರೈಲ್ವೆ ಎಂದು ದಾಖಲಾಗಿದ್ದು, ಡಯಗ್ಲಾಟ್‌ನಲ್ಲಿ **"ಕೊಂಡ" (Hill)** ಎಂದು ನಮೂದಾಗಿರುತ್ತದೆ. ಸದರಿ ಪ್ರದೇಶವು ಗುಡ್ಡ ಪ್ರದೇಶವಾಗಿದ್ದು, ಹೊಸಪೇಟೆಯ ನಗರಸಭೆ ವ್ಯಾಪ್ತಿಯಲ್ಲಿ ಬರುತ್ತದೆ. ಸದರಿ ಜಮೀನಿನಲ್ಲಿ ಬೆಲೆ ಬಾಳುವ ತೇಗದ ಮತ್ತು ಇತರೆ ಗಿಡಗಳನ್ನು ಅರಣ್ಯ ಇಲಾಖೆ ವತಿಯಿಂದ ಸಸಿಗಳನ್ನು ನೆಟ್ಟಿರುವಂತೆ ಕಂಡು ಬರುತ್ತದೆ. ಸದರಿ ಪ್ರದೇಶವು ತುಂಗಭದ್ರ ಅಣೆಕಟ್ಟೆಗೆ ಹೊಂದಿಕೊಂಡಿದ್ದು, ಇದರ ಒಂದು ಬದಿಗೆ ಅಣೆಕಟ್ಟಿನ ನೀರು ನಿಂತಿರುತ್ತದೆ. ಇನ್ನೊಂದು ಬದಿಗೆ ಪಶ್ಚಿಮ ದಿಕ್ಕಿಗೆ ರೈಲ್ವೆ ಟ್ರಕ್ ಮತ್ತು ರಾಷ್ಟ್ರೀಯ ಹೆದ್ದಾರಿ– 13 ಇರುತ್ತದೆ. ಸದರಿ ವಿಷಯದ ಬಗ್ಗೆ ರೈಲ್ವೆ ಇಲಾಖೆ ಮತ್ತು ಕಾರ್ಯದರ್ಶಿಗಳು, ತುಂಗಭದ್ರ ಮಂಡಳಿ, ಹೊಸಪೇಟೆ ಇವರು ಕೆಲವು ಷರತ್ತುಗಳನ್ನು ವಿಧಿಸಿ, ನಿರಾಕ್ಷೇಪಣಾ ಪತ್ರವನ್ನು ನೀಡಿರುತ್ತಾರೆ. ಉಪ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಹೊಸಪೇಟೆ ಇವರು ಸ್ಥಳ ತನಿಖೆ ಮಾಡಿ ಯಾವುದೇ ಲೋಹ ನಿಕ್ಷೇಪಗಳು ಇರುವುದಿಲ್ಲವಾದ್ದರಿಂದ ಸದರಿ ಪ್ರದೇಶದಲ್ಲಿ ಪವನ ವಿದ್ಯುತ್ ಯೋಜನೆಗಾಗಿ ನಿರಾಕ್ಷೇಪಣಾ ಪತ್ರವನ್ನು ನೀಡಿರುತ್ತಾರೆಂದು ವರದಿ ಮಾಡಿರುತ್ತಾರೆ.

ಮೆ॥ ಎಂ.ಎಸ್.ಪಿ.ಎಲ್ ಗ್ಯಾಸಸ್, ಹೊಸಪೇಟೆ ಇವರು ದಿ: 18.08.2010 ರಂದು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ: ಇಎನ್ 173 ಎನ್‌ಸಿಇ 2008, ದಿನಾಂಕ: 24.12.2008 ರಲ್ಲಿ ಹೊಸಪೇಟೆ ತಾಲ್ಲೂಕಿನ ಅಮರಾವತಿ ಗ್ರಾಮದಲ್ಲಿ 8.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್‌ಚ್ಛಕ್ತಿ ಯಂತ್ರಗಳನ್ನು ಸ್ಥಾಪಿಸಲು ಅನುಮತಿ ನೀಡಿರುವುದರಿಂದ ಅಮರಾವತಿ ಗ್ರಾಮದ ಸ.ನಂ. 571 ರಲ್ಲಿ 9.20 ಹೆಕ್ಟೇರ್ ಸರ್ಕಾರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ನೀಡುವಂತೆ ಕೋರಿರುತ್ತಾರೆ.

ಹೊಸಪೇಟೆ ತಾಲ್ಲೂಕು ಅಮರಾವತಿ ಗ್ರಾಮದ ಕಳೆದ ಮೂರು ವರ್ಷಗಳ ಜಮೀನು ಮಾರಾಟದ ಅಂಕಿ ಅಂಶಗಳ ತಖ್ತೆಯಂತೆ ಪ್ರತಿ ಎಕರೆಗೆ ಸರಾಸರಿ ಮೊತ್ತ ₹.3,16,778,74/– ಗಳಾಗಿರುತ್ತದೆಂದು ಉಪ ನೋಂದಣಾಧಿಕಾರಿಗಳು, ಹೊಸಪೇಟೆ ಇವರು ತಮ್ಮ ದಿ: 17.10.2014ರ ಪತ್ರದಲ್ಲಿ ತಿಳಿಸಿರುತ್ತಾರೆ.

ಪವನ ವಿದ್ಯುತ್ ಉತ್ಪಾದಿಸಲು ಕೋರಿರುವ ಸಂಸ್ಥೆಗಳು: ಟರ್ಬನ್ ಮತ್ತು ಇತರೆ ಸಲಕರಣೆಗಳನ್ನು ಅಳವಡಿಸಲು ಸಾಕಷ್ಟು ಕಾಲಾವಕಾಶ ಬೇಕಾಗುತ್ತದೆ. ಈ ಸಂಸ್ಥೆಯ ಕೋರಿಕೆ ಮೇರೆಗೆ ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರು ದಿ: 15.12.2014 ರಂದು 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್ ಡಿ 41 ಎಲ್‌ಜಿಇ 2011, ಬೆಂಗಳೂರು, ದಿನಾಂಕ: 26/02/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಅಮರಾವತಿ ಗ್ರಾಮ ಸ.ನಂ. 571 ರಲ್ಲಿ 9.20 ಹೆಕ್ಟೇರ್ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 19ರನ್ವಯ ಮಾರುಕಟ್ಟೆ ದರದ ಶೇ. 10 ರಷ್ಟು ವಾರ್ಷಿಕ ಗುತ್ತಿಗೆ ದರ ನಿಗಧಿಪಡಿಸಿ, ಪ್ರತಿ 2 ವರ್ಷಗಳಿಗೊಮ್ಮೆ ಶೇ.10 ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು ಹಾಗೂ ನಿಯಮಾನುಸಾರ ಇನ್ನಿತರ ದರಗಳನ್ನು ವಿಧಿಸಿ, ಪವನ ವಿದ್ಯುತ್ ಪ್ರಾಜೆಕ್ಟ್‌ಗಾಗಿ ಮೆ॥ ಎಂ.ಎಸ್. ಪಿ.ಎಲ್. ಗ್ಯಾಸಸ್, ಹೊಸಪೇಟೆ ಇವರಿಗೆ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು:–**

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಪ್ರಸ್ತಾಪಿತ ಜಮೀನು ಸಂಸ್ಥೆಗೆ ಅವಶ್ಯವಿಲ್ಲದಿದ್ದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
4. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೊಡಿಕೊಳ್ಳತಕ್ಕದ್ದು.
5. ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ಉಪಗುತ್ತಿಗೆ ನೀಡಿರುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾತಕ್ಕದ್ದಲ್ಲ.
6. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ನಿಯಮಾನುಸಾರ ತೆಗೆದುಕೊಳ್ಳಲಾಗುವುದು.

P.R.226

SC-25

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರೇವಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

## ಒಳಾಡಳಿತ ಸಚಿವಾಲಯ

**ವಿಷಯ :** ಮಾನ್ಯ ಮುಖ್ಯಮಂತ್ರಿಯವರ ಪದಕ (ಪೊಲೀಸ್ ಸಿಬ್ಬಂದಿ) ನಿಯಮಗಳು 1982ಕ್ಕೆ ತಿದ್ದುಪಡಿ ಮಾಡುವ ವಿಚಾರದ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 151 ಪಿ.ಎ.ಎಂ. 82, ದಿನಾಂಕ: 12–11–1982.
2. ಸರ್ಕಾರದ ಆದೇಶ ಸಂಖ್ಯೆ: ಒಇ 213 ಪೊಸಇ 2006, ದಿನಾಂಕ: 21–07–2011.
3. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಕಛೇರಿಯ ಪತ್ರ ಸಂಖ್ಯೆ: ಸಿಬಿ–7/22/1999–2000, ದಿನಾಂಕ: 20–04–2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ 1982 ರಿಂದ ಪ್ರತಿ ವರ್ಷ, ಸೂಕ್ಷ್ಮಾತಿಸೂಕ್ಷ್ಮ ಅಪರಾಧ ಪ್ರಕರಣಗಳನ್ನು ಪತ್ತೆ ಮಾಡುವಲ್ಲಿ, ಅಗಾಧವಾದ ಕಳುವು ಮಾಲನ್ನು ವಶಕ್ಕೆ ಪಡೆಯುವಲ್ಲಿ, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವಲ್ಲಿ, ನಕ್ಸಲೈಟ್ ಚಟುವಟಿಕೆಗಳನ್ನು ನಿಗ್ರಹಿಸುವಲ್ಲಿ, ಗುಪ್ತವಾರ್ತೆಯನ್ನು ಸಂಗ್ರಹಿಸುವಲ್ಲಿ ಹಾಗೂ ರಸ್ತೆ ಸಂಚಾರ ಸುರಕ್ಷತೆಯನ್ನು ನಿರ್ವಹಿಸುವ ನಿಟ್ಟಿನಲ್ಲಿ ಕರ್ತವ್ಯ ನಿಷ್ಠೆ, ಕಾರ್ಯ ಕೌಶಲ್ಯ ಮತ್ತು ವೃತ್ತಿ ನಿಪುಣತೆಯನ್ನು ಪ್ರದರ್ಶಿಸಿ ಇನ್ನಿತರ ಅಧಿಕಾರಿಗಳಿಗೆ ಮಾದರಿಯಾದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರಿಗೆ ಮಾನ್ಯ ಮುಖ್ಯಮಂತ್ರಿಯವರ ಪದಕವನ್ನು ನೀಡುವ ವ್ಯವಸ್ಥೆಯನ್ನು ಜಾರಿಗೆ ತಂದಿರುತ್ತದೆ. ಈ ಪದಕ ನೀಡುವ ಕಾರ್ಯ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುವ ಸಲುವಾಗಿ **"ಮುಖ್ಯಮಂತ್ರಿಗಳ ಪದಕ ನಿಯಮಗಳು 1982"** ನ್ನು ಜಾರಿಗೆ ತರಲಾಗಿದೆ. ಸದರಿ ನಿಯಮಗಳ ಪ್ರಕಾರ ಆಯ್ಕೆಯಾದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರಿಗೆ ಚಿನ್ನ, ಬೆಳ್ಳಿ ಹಾಗೂ ಕಂಚಿನ ಪದಕಗಳನ್ನು ನೀಡಲಾಗುತ್ತಿತ್ತು. 2008–09ನೇ ಸಾಲಿನಿಂದ ಈ ಮೂರು ಪದಕಗಳ ಬದಲಾಗಿ ಒಂದೇ ಚಿನ್ನದ ಪದಕವನ್ನು ಪದಕ ವಿಜೇತರಿಗೆ ನೀಡಲಾಗುತ್ತಿದೆ. ಈ ಮೊದಲು ಪೊಲೀಸ್ ಸಿಬ್ಬಂದಿ ಬಲಕ್ಕೆ ಅನುಗುಣವಾಗಿ ಪ್ರತಿ ವರುಷ 50 ಪದಕಗಳನ್ನು ನೀಡಲಾಗುತ್ತಿತ್ತು.

2005ನೇ ಸಾಲಿನಲ್ಲಿ, ಪೊಲೀಸ್ ಸಿಬ್ಬಂದಿಯ ಬಲ 74,646ಕ್ಕೆ ಏರಿದ್ದರಿಂದ ಪದಕಗಳ ಸಂಖ್ಯೆಯನ್ನು ಮೇಲೆ ಓದಲಾದ (2)ರ ಆದೇಶದಲ್ಲಿ 50ಕ್ಕೆ ಬದಲಾಗಿ 75ಕ್ಕೆ ಹೆಚ್ಚಿಸಿರುತ್ತದೆ. ಪ್ರಸ್ತುತ ಪೊಲೀಸ್ ಇಲಾಖೆಯ ಸಿಬ್ಬಂದಿಯ ಬಲ ಸುಮಾರು ಒಂದು ಲಕ್ಷ ಆಗಿರುತ್ತದೆ. ಈ ಸಿಬ್ಬಂದಿ ಬಲಕ್ಕೆ ಅನುಗುಣವಾಗಿ ಇನ್ನೂ ಹೆಚ್ಚಿನ ಸಿಬ್ಬಂದಿಗೆ ಪದಕಗಳನ್ನು ನೀಡುವ ಅವಶ್ಯಕತೆ ಇರುತ್ತದೆ. ಆದ್ದರಿಂದ ಸಿಬ್ಬಂದಿಯವರುಗಳು ನಿರ್ವಹಿಸುವಂತಹ ಕಾರ್ಯಗಳಿಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಮತ್ತು ಉತ್ತೇಜನ ನೀಡುವ ನಿಟ್ಟಿನಲ್ಲಿ ಈಗಿರುವ 75 ಪದಕಗಳಿಗೆ ಬದಲಾಗಿ ಮಾನ್ಯ ಮುಖ್ಯಮಂತ್ರಿಗಳು ನೀಡುವ ಪದಕಗಳನ್ನು 100ಕ್ಕೆ ಹೆಚ್ಚಿಸುವಂತೆ ಹಾಗೂ ಪ್ರಸ್ತುತ ಪದಕ ವಿಜೇತರಿಗೆ ಪ್ರೋತ್ಸಾಹಧನವನ್ನಾಗಿ ರೂ. 5000/–ಗಳನ್ನು ನೀಡಲಾಗುತ್ತಿದ್ದು, ಮಾನ್ಯ ಮುಖ್ಯಮಂತ್ರಿಗಳ ಪದಕಗಳಿಗೆ ಇನ್ನೂ ಹೆಚ್ಚಿನ ಮಹತ್ವ ಬರುವಂತಾಗಲು ಹಾಗೂ ಪದಕ ಪಡೆದವರು ಹೆಚ್ಚಿನ ಹೆಮ್ಮೆ ಪಡುವಂತಾಗಲು ಈ ಪ್ರೋತ್ಸಾಹ ಧನವನ್ನು ರೂ. 25,000/–ಗಳಿಗೆ ಹೆಚ್ಚಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 115 ಪೊಸಇ 2015, ಬೆಂಗಳೂರು, ದಿನಾಂಕ : 14–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿನ ಅಧಿಕಾರಿ/ಸಿಬ್ಬಂದಿಗಳಿಗೆ ಮುಖ್ಯಮಂತ್ರಿಗಳ ಪದಕ (ಪೊಲೀಸ್ ಸಿಬ್ಬಂದಿ) ನಿಯಮಗಳು–1982 ರನ್ವಯ ಪ್ರಸ್ತುತ ನೀಡುತ್ತಿರುವ 75 ಪದಕಗಳನ್ನು 100ಕ್ಕೆ ಹಾಗೂ ಪ್ರೋತ್ಸಾಹ ಧನವನ್ನು ರೂ. 5000/– ದಿಂದ

ರೂ. 10,000/- ಕ್ಕೆ ಹೆಚ್ಚಿಸಲು, ಪೊಲೀಸ್ ಇಲಾಖೆಗೆ ಒದಗಿಸಿರುವ ಆಯವ್ಯಯದ ಮಿತಿಯಲ್ಲಿ ಭರಿಸುವ ಷರತ್ತಿಗೊಳಪಟ್ಟು ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:404:ವೆಚ್ಚ-11:2015, ದಿನಾಂಕ: 06-10-2015ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

**PR-240**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಎ)

## ಸಹಕಾರ ಸಚಿವಾಲಯ

**ವಿಷಯ :** 2015-16ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆ 2425-00-001-0-01-195 ಸಾರಿಗೆ ವೆಚ್ಚದಡಿ ಉಳಿದಿರುವ ರೂ. 10.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2425-00-001-0-01-71 ಕಟ್ಟಡ ವೆಚ್ಚದಡಿ ಪುನರ್ ವಿನಿಯೋಗದ ಮುಖಾಂತರ ಹೆಚ್ಚುವರಿ ಅನುದಾನವನ್ನು ಒದಗಿಸುವ ಕುರಿತು ಆದೇಶ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಬಿಯುಡಿ-2/81/ಪು.ವಿ/2015-16, ದಿನಾಂಕ: 27-02-2016.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, 2015-16 ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆ 2425-00-001-0-01-71 ಕಟ್ಟಡ ವೆಚ್ಚದಡಿ ರೂ. 109.00ಲಕ್ಷಗಳಿಗೆ ಆಯವ್ಯಯ ಅವಕಾಶ ಕಲ್ಪಿಸಿದ್ದು, ಸದರಿ ಮೊತ್ತವನ್ನು ಸಂಪೂರ್ಣ ವೆಚ್ಚ ಮಾಡಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಬೆಂಗಳೂರು ನಗರ ಜಿಲ್ಲೆಯ ಕೆಲವು ಕಚೇರಿಗಳು ಮಲ್ಲೇಶ್ವರಂನಿಂದ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ರೇಸ್ ಕೋರ್ಸ್ ರಸ್ತೆ, ಬೆಂಗಳೂರು ಇದರ ಕಟ್ಟಡಕ್ಕೆ ಸ್ಥಳಾಂತರಿಸಿರುವುದರಿಂದ ಸದರಿ ಕಚೇರಿಗಳ ಮಾರ್ಚ್ 2016 ರವರೆಗಿನ ಅವಧಿಯ ಕಟ್ಟಡ ಬಾಡಿಗೆ ಬಾಬ್ತು ರೂ. 40.00ಲಕ್ಷಗಳ ಹೆಚ್ಚುವರಿ ಬೇಡಿಕೆ ಇದ್ದು. ಈ ಬೇಡಿಕೆ ಪೂರೈಸುವ ಸಲುವಾಗಿ ಯೋಜನೇತರ ಲೆಕ್ಕ ಶೀರ್ಷಿಕೆ 2425-00-001-0-01-195 ಸಾರಿಗೆ ವೆಚ್ಚದಡಿ ಉಳಿತಾಯವಾಗಿರುವ ರೂ. 10.00ಲಕ್ಷಗಳನ್ನು ಪುನರ್ ವಿನಿಯೋಗದ ಮುಖಾಂತರ ಯೋಜನೇತರ ಲೆಕ್ಕ ಶೀರ್ಷಿಕೆ 2425-00-001-0-01-71 ಕಟ್ಟಡ ವೆಚ್ಚದಡಿ ಅನುದಾನ ಒದಗಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 127 ಸಿಎಲ್ಎಸ್ 2016, ಬೆಂಗಳೂರು, ದಿನಾಂಕ : 15-03-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015-16 ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆ 2425-00-001-0-01-195 ಸಾರಿಗೆ ವೆಚ್ಚದಡಿ ಉಳಿದಿರುವ ರೂ. 10.00 ಲಕ್ಷ (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ 2425-00-001-0-01-71 ಕಟ್ಟಡ ವೆಚ್ಚದಡಿ ಪುನರ್‌ವಿನಿಯೋಗದ ಮುಖಾಂತರ ಹೆಚ್ಚುವರಿ ಅನುದಾನವನ್ನು ಒದಗಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 11 ಟಿಎಫ್‌ಪಿ 2007, ದಿನಾಂಕ: 27-11-2007ರಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**PR-241**
**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಲೆಕ್ಕ ಶೀರ್ಷಿಕೆ 2425-00-107-2-41-ರಡಿಯಲ್ಲಿ ಸ್ವಸಹಾಯ ಗುಂಪುಗಳ ಮೇಲಿನ ಬಡ್ಡಿ ಸಹಾಯಧನ, ಪಶುಭಾಗ್ಯ ಮತ್ತು ಮೀನುಗಾರಿಕೆ ಸಾಲಗಳಿಗೆ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಉಳಿತಾಯವಾಗುವ ಮೊತ್ತವನ್ನು ಬೆಳೆ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಬಿಡುಗಡೆ ಮಾಡಲು ಆದೇಶ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಸಿಎಬಿ-1/7/2015-16, ದಿನಾಂಕ: 02-03-2016.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015-16 ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425-00-107-2-41ರಡಿ ರೂ. 73741.00ಲಕ್ಷ ಅನುದಾನ ಕಲ್ಪಿಸಿದ್ದು, ಇನ್ನು ಹೆಚ್ಚುವರಿ ಅನುದಾನ ಬೇಕಾಗಿರುವುದರಿಂದ ಸ್ವಸಹಾಯ ಗುಂಪುಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿ ಉಳಿತಾಯವಾಗುವ ಮೊತ್ತ ರೂ. 2337.25ಲಕ್ಷಗಳು, ಪಶುಭಾಗ್ಯ ಯೋಜನೆಯಲ್ಲಿ ಇದುವರೆಗೂ ಯಾವುದೇ ಬಿಲ್ಲುಗಳು ಸಲ್ಲಿಕೆಯಾಗದೇ ಇರುವುದರಿಂದ ಈ ಸಾಲಿನಲ್ಲಿ ಉಳಿತಾಯವಾಗುವ ಮೊತ್ತ ರೂ. 685.00ಲಕ್ಷಗಳು ಮತ್ತು ಮೀನುಗಾರಿಕೆ ಸಾಲಗಳಿಗೆ ಬಡ್ಡಿ ಸಹಾಯಧನ ಯೋಜನೆಯಲ್ಲಿ ಇದುವರೆಗೂ ಯಾವುದೇ ಬಿಲ್ಲುಗಳು ಸಲ್ಲಿಕೆಯಾಗದೇ ಇರುವುದರಿಂದ ಉಳಿತಾವಾಗುವ ಮೊತ್ತ ರೂ.240.00ಲಕ್ಷಗಳನ್ನು ಒಟ್ಟಾರೆ ರೂ. 3262.25ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2425-00-107-2-41 ರಡಿ ಕೃಷಿ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿ ಬಳಕೆ ಮಾಡಲು ಅನುದಾನ ಒದಗಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 186 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ : 15–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015–16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿಯಲ್ಲಿ ಸ್ವಸಹಾಯ ಗುಂಪುಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿ ಉಳಿತಾಯವಾಗುವ ಮೊತ್ತ ರೂ. 2337.25ಲಕ್ಷಗಳು, ಪಶುಭಾಗ್ಯ ಯೋಜನೆಯಡಿ ಉಳಿತಾಯವಾಗುವ ಮೊತ್ತ ರೂ. 685.00ಲಕ್ಷಗಳು, ಮೀನುಗಾರಿಕೆ ಸಾಲಗಳಿಗೆ ಬಡ್ಡಿ ಸಹಾಯಧನ ಯೋಜನೆಯಡಿ ಉಳಿತಾಯವಾಗುವ ಮೊತ್ತ ರೂ.240.00ಲಕ್ಷಗಳು ಸೇರಿ ಒಟ್ಟು ಮೊತ್ತ ರೂ. 3262.25 ಲಕ್ಷಗಳನ್ನು ಅದೇ ಲೆಕ್ಕ ಶೀರ್ಷಿಕೆ (Same Head Of Account) 2425–00–107–2–41 ರಡಿ ಬೆಳೆ ಸಾಲದ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

**ಯೋಜನೆ :** ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ

ಲೆಕ್ಕ ಶೀರ್ಷಿಕೆ 2425–00–107–2–41

**(ರೂ. ಲಕ್ಷಗಳಲ್ಲಿ)**

| | |
|---|---|
| 106–ಸಾಮಾನ್ಯ | 2730.75 |
| 422–ವಿಶೇಷ ಘಟಕ ಯೋಜನೆ | 280.50 |
| 423–ಗಿರಿಜನ ಉಪ ಯೋಜನೆ | 251.00 |
| **ಒಟ್ಟು** | **3262.25** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ: 19–01–2016 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

**PR-242**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಸ್ವಸಹಾಯ ಗುಂಪುಗಳ ಸಾಲದ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಇ 22 ಆಂಅಸ 2015, ಬೆಂಗಳೂರು, ದಿನಾಂಕ: 08–05–2015.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 202 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 28–09–2015.
3. ಸರ್ಕಾರದ ಆದೇಶ ಸಂಖ್ಯೆ: ಸಿಒ 202 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 30–12–2015.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂ: ಸಿಆರ್‌ಡಿ/ಕೆಎಂಈ–8/1/2015–16, ದಿನಾಂಕ: 12–02–2016.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ರೂ. 8600.00ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ: 01–04–2015 ರಿಂದ 31–03–2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ಮತ್ತು (3) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಸದರಿ ಯೋಜನೆಯಡಿ ರೂ. 8600.00ಲಕ್ಷಗಳಲ್ಲಿ ಶೇ.25 ಭಾಗದ ರೂ.2150.00ಲಕ್ಷಗಳ ಅನುದಾನವನ್ನು ಮೊದಲನೇ ಕಂತು ಹಾಗೂ ಎರಡನೇ ಕಂತುಗಳಲ್ಲಿ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಕಲ್ಪಿಸಿರುವ ರೂ. 8600.00ಲಕ್ಷಗಳಲ್ಲಿ ಶೇ.25 ಭಾಗದ ರೂ. 2150.00ಲಕ್ಷಗಳ ಪೈಕಿ ಸಾಮಾನ್ಯ ಸದಸ್ಯರಿಗೆ ಸಂಬಂಧಿಸಿದ ಮೊತ್ತ ರೂ. 1962.75ಲಕ್ಷಗಳನ್ನು ಮೂರನೇ ಕಂತನ್ನಾಗಿ ಬಿಡುಗಡೆ ಮಾಡುವಂತೆ

ಕೋರಿರುತ್ತಾರೆ. ಮೊದಲನೇ ಕಂತು ಮತ್ತು ಎರಡನೇ ಕಂತುಗಳಲ್ಲಿ ಬಿಡುಗಡೆಗೊಳಿಸಿದ ಒಟ್ಟು ಮೊತ್ತ ರೂ. 4300.54ಲಕ್ಷಗಳ ಪೈಕಿ ರೂ.4208.54 ಲಕ್ಷ ಬಳಕೆಯಾಗಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 202 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ : 11–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16ನೇ ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ 106–ಸಾಮಾನ್ಯ ರೂ. 1962.75 ಲಕ್ಷ (ಒಂದು ಸಾವಿರದ ಒಂಭೈನೂರ ಅರವತ್ತೆರಡು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 52 ವೆಚ್ಚ–2/2016, ದಿನಾಂಕ: 09–03–2016 ಮತ್ತು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ: 19–01–2016 ರಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

**PR-243**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಮತ್ತು ವಾಣಿಜ್ಯ ತೆರಿಗೆ ಅಧಿಕಾರಿ ವೃಂದದ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ವಾಣಿಜ್ಯ ತೆರಿಗೆ ಆಯುಕ್ತರು ಪತ್ರದ ಸಂ: ವಾತೆಸ (ಸಿ–1)/ಜಿಎಜಡ್/2ಎ ಸಿಆರ್–19/13–14, ದಿನಾಂಕ: 17–07–2015.

**ಪ್ರಸ್ತಾವನೆ :**

ವಾಣಿಜ್ಯ ತೆರಿಗೆಗಳ ಆಯುಕ್ತರ ಮೇಲೆ ಓದಲಾದ ದಿನಾಂಕ: 17–07–2015ರ ಪತ್ರದಲ್ಲಿ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದ 321 ಹುದ್ದೆಗಳು ಹಾಗೂ ವಾಣಿಜ್ಯ ತೆರಿಗೆ ಅಧಿಕಾರಿಗಳ 526 ಹುದ್ದೆಗಳು ಮಂಜೂರಾಗಿದ್ದು, ಇಲಾಖೆಯಲ್ಲಿ ಕಳೆದ ಹತ್ತು ವರ್ಷಗಳಲ್ಲಿ ವರ್ತಕರ ಸಂಖ್ಯೆ ಹಾಗೂ ತೆರಿಗೆ ಸಂಗ್ರಹಗಳಲ್ಲಿ ಗಣನೀಯವಾಗಿ ಹೆಚ್ಚಳವಾಗಿರುವುದಾಗಿ ತಿಳಿಸಿದ್ದಾರೆ. 2005–06ನೇ ಸಾಲಿನಲ್ಲಿ ಕರದಾತರ ಸಂಖ್ಯೆ 327230 ಗಳಿದ್ದು ವರ್ಷದಿಂದ ವರ್ಷಕ್ಕೆ ವರ್ತಕರ ಸಂಖ್ಯೆ ವೃದ್ಧಿಯಾಗುತ್ತಿದ್ದು, ಅಧಿಕಾರಿ ಹಾಗೂ ನೌಕರರ ಪರಿಶ್ರಮದಿಂದ ಹಾಗೂ ವ್ಯಾಪಾರ ವೃದ್ಧಿಯಿಂದ ತೆರಿಗೆ ಸಂಗ್ರಹಣೆಯಲ್ಲಿ ಗಮನಾರ್ಹ ಏರಿಕೆ ಕಂಡು ಬಂದಿರುತ್ತದೆ. ಕರನಿರ್ಧಾರಣೆಗೆ ಸಂಬಂಧಿಸಿದಂತೆ ಈಗ ಲೆಕ್ಕಪರಿಶೋಧನೆ ಕಾರ್ಯಕ್ಕೆ ನಿಯೋಜಿಸಿರುವ ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಹಾಗೂ ವಾಣಿಜ್ಯ ತೆರಿಗೆ ಉಪ ಆಯುಕ್ತರು 5 ಲಕ್ಷಕ್ಕಿಂತ ಅಧಿಕ ವರ್ತಕರಿಗೆ ಸಂಬಂಧಿಸದಂತೆ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ, ಕೇಂದ್ರ ಮಾರಾಟ ತೆರಿಗೆ ಕಾಯ್ದೆ, ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ, ಕರ್ನಾಟಕ ವಿಲಾಸ ತೆರಿಗೆ ಕಾಯ್ದೆ, ಕರ್ನಾಟಕ ವೃತ್ತಿ ತೆರಿಗೆ ಕಾಯ್ದೆ, ಜೂಜು ತೆರಿಗೆ ಕಾಯ್ದೆ, ಕರ್ನಾಟಕ ಕೃಷಿ ವರಮಾನ ತೆರಿಗೆ ಕಾಯ್ದೆ, ಕರ್ನಾಟಕ ಮನರಂಜನಾ ತೆರಿಗೆ ಕಾಯ್ದೆ, ಕರ್ನಾಟಕ ಮಾರಾಟ ತೆರಿಗೆ ಕಾಯ್ದೆಗಳ ಅಡಿಯಲ್ಲಿ ಕೆಲವು ಪ್ರಕರಣಗಳಲ್ಲಿ ಲೆಕ್ಕ ಪರಿಶೋಧನೆ ಮಾಡುವ ಅಗತ್ಯತೆ ಇರುತ್ತದೆ ಎಂದು ತಿಳಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಈಗ ಸೀಮಿತ ಸಂಖ್ಯೆಯಲ್ಲಿರುವ ಅಧಿಕಾರಿಗಳಿಂದ ಸಾಕಷ್ಟು ಪ್ರಕರಣಗಳಲ್ಲಿ ಕರನಿರ್ಧರಣೆ/ಮರುಕರನಿರ್ಧರಣೆ ಪ್ರಕ್ರಿಯೆ ಕೈಗೊಂಡು ಪೂರೈಸಲು ಸಾಧ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಹೆಚ್ಚಿನ ಅಧಿಕಾರಿಗಳನ್ನು ಕರನಿರ್ಧಾರಣೆ ಕಾರ್ಯಕ್ಕೆ ನಿಯೋಜಿಸುವ ಅಗತ್ಯತೆ ಇರುತ್ತದೆ. ಈ ರೀತಿ ಕರನಿರ್ಧರಣಾ ಕಾರ್ಯಕ್ಕೆ ಹೆಚ್ಚಿನ ಅಧಿಕಾರಿಗಳನ್ನು ನಿಯೋಜಿಸಿದರೆ ತೆರಿಗೆ ಸಂಗ್ರಹಣೆಗೆ ಸಹಕಾರಿಯಾಗುವ ಜೊತೆಗೆ ಇಲಾಖೆಗೆ ನಿಗಧಿಪಡಿಸಿರುವ ತೆರಿಗೆ ಗುರಿಯನ್ನು ತಲುಪಲು ಸಾಧ್ಯವಾಗುತ್ತದೆ. ಈ ಕಾರಣಗಳಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದಲ್ಲಿ ಹೆಚ್ಚುವರಿಯಾಗಿ 65 ಹುದ್ದೆಗಳನ್ನು ಮತ್ತು ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದಲ್ಲಿ ಹೆಚ್ಚುವರಿಯಾಗಿ 100 ಹುದ್ದೆಗಳನ್ನು ಸೃಜಿಸುವ ಅನಿವಾರ್ಯತೆ ಇರುವುದರಿಂದ ಹೊಸದಾಗಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವಂತೆ ಕೋರಿದ್ದಾರೆ.

| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು | 65 | 28100–50100 |
| 2 | ವಾಣಿಜ್ಯ ತೆರಿಗೆ ಅಧಿಕಾರಿ | 100 | 22800–43200 |

ವಾಣಿಜ್ಯ ತೆರಿಗೆಗಳ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಮುಂದಿನಂತೆ ಆದೇಶಿಸುತ್ತದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಸರ್ಕಾರದ ಆದೇಶ ಸಂಖ್ಯೆ : ಆಇ 160 ವಾತೆಇ 2013, ಬೆಂಗಳೂರು, ದಿನಾಂಕ : 16ನೇ ನವೆಂಬರ್ 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವರ್ಷದಿಂದ ವರ್ಷಕ್ಕೆ ವರ್ತಕರ ಸಂಖ್ಯೆ ವೃದ್ಧಿಯಾಗುತ್ತಿದ್ದು, ಅಧಿಕಾರಿ ಹಾಗೂ ನೌಕರರ ಪರಿಶ್ರಮದಿಂದ ಹಾಗೂ ವ್ಯಾಪಾರ ವೃದ್ಧಿಯಿಂದ ತೆರಿಗೆ ಸಂಗ್ರಹಣೆಯಲ್ಲಿ ಗಮನಾರ್ಹ ಏರಿಕೆ ಕಂಡು ಬಂದಿರುವುದರಿಂದ ತೆರಿಗೆ ಸಂಗ್ರಹಣೆಗೆ ಸಹಕಾರಿಯಾಗುವ ಜೊತೆಗೆ ಇಲಾಖೆಗೆ ನಿಗಧಿಪಡಿಸಿರುವ ತೆರಿಗೆ ಗುರಿಯನ್ನು ತಲುಪುವ ಸಲುವಾಗಿ ಮಿತವ್ಯಯ ಆದೇಶವನ್ನು ಸಡಿಲಿಸಿ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಗ್ರೂಪ್–ಎ (ಕಿರಿಯ ಶ್ರೇಣಿ) | 065 (ಅರವತ್ತೈದು) | 28100–50100 |
| 2 | ವಾಣಿಜ್ಯ ತೆರಿಗೆ ಅಧಿಕಾರಿ (ಗ್ರೂಪ್–ಬಿ) | 100 (ಒಂದುನೂರು) | 22800–43200 |

ಮೇಲಿನ ಹುದ್ದೆಗಳನ್ನು ಹಂತ ಹಂತವಾಗಿ ತುಂಬಲು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ) ಯ ಟಿಪ್ಪಣಿ ಸಂಖ್ಯೆ: ಸಿಆಸುಇ 304 ಸಿಶಾಸೇ 2015 ದಿನಾಂಕ: 09–10–2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**PR-244**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಅಳವಂಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ವಾ.ತೆ.–2 & ಸಮನ್ವಯ)

## ಸಹಕಾರ ಸಚಿವಾಲಯ

**ವಿಷಯ :** 2014–15 ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆ 2425–00–001–0–01–051 ಸಾಮಾನ್ಯ ವೆಚ್ಚದಡಿ ರೂ. 8.50 ಲಕ್ಷಗಳನ್ನು ಪುನರ್‌ವಿನಿಯೋಗದ ಮುಖಾಂತರ ಅನುದಾನ ಮಂಜೂರು ಮಾಡಿ ಆದೇಶ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಬಿಯುಡಿ–2/81/ಪು.ವಿ./2015–16, ದಿನಾಂಕ: 27–02–2016.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015–16ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆ 2425–00–001–0–01–051 ಸಾಮಾನ್ಯ ವೆಚ್ಚದಡಿ ರೂ. 103.00 ಲಕ್ಷಗಳ ಅವಕಾಶ ಕಲ್ಪಿಸಿದ್ದು, ಸದರಿ ಮೊತ್ತವನ್ನು ಸಂಪೂರ್ಣ ವೆಚ್ಚ ಮಾಡಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಇಲಾಖೆಯ ವಿವಿಧ ಕಛೇರಿಗಳಲ್ಲಿ ಬಾಹ್ಯ ಮೂಲದ ಮೂಲಕ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ವೇತನವನ್ನು 051 ಕಛೇರಿ ವೆಚ್ಚದಿಂದ ಭರಿಸುತ್ತಿದ್ದು, ಈ ಸಿಬ್ಬಂದಿಗಳಿಗೆ ವೇತನ ಪಾವತಿಸಲು ಬಾಕಿ ಇರುವ ವೇತನ ಪಾವತಿಸಲು ಅಧೀನ ಕಛೇರಿಗಳಿಂದ ಕಛೇರಿ ವೆಚ್ಚದಡಿ ರೂ. 24.20ಲಕ್ಷಗಳ ಹೆಚ್ಚುವರಿ ಬೇಡಿಕೆ ಇರುವುದಾಗಿ ತಿಳಿಸಿ. ಈ ಬೇಡಿಕೆ ಪೂರೈಸುವ ಸಲುವಾಗಿ 041–ಪ್ರಯಾಣ ವೆಚ್ಚದಡಿ ಉಳಿತಾಯವಾಗಿರುವ ರೂ. 8.50ಲಕ್ಷಗಳನ್ನು ಪುನರ್ವಿನಿಯೋಗದ ಮುಖಾಂತರ 051–ಸಾಮಾನ್ಯ ವೆಚ್ಚದಡಿ ಅನುದಾನ ಒದಗಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 127 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ : 15–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015–16ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆ 2425–00–001–0–01–041 ಪ್ರಯಾಣ ವೆಚ್ಚದಡಿ ಉಳಿದಿರುವ ರೂ. 8.50ಲಕ್ಷ (ಎಂಟು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಲೆಕ್ಕ ಶೀರ್ಷಿಕೆ 2425–00–001–0–01–051 ಸಾಮಾನ್ಯ ವೆಚ್ಚದಡಿ ಪುನರ್ವಿನಿಯೋಗದ ಮುಖಾಂತರ ಹೆಚ್ಚುವರಿ ಅನುದಾನವನ್ನು ಒದಗಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 11 ಟಿಎಫ್‌ಪಿ 2007, ದಿನಾಂಕ: 27–11–2007 ರಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**PR-245**
**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59